




# ಸಪ್ತಗಿರಿ

ಕನ್ನಡ, ತೆಲುಗು, ತಮಿಳು, ಇಂಗ್ಲೀಷ್,
ಹಿಂದಿಗಳಲ್ಲಿ ಪ್ರಕಟವಾಗುವ ಮಾಸಪತ್ರಿಕೆ.

**ಬಿಡಿ ಪ್ರತಿ ೫೦ ಪೈಸೆ.**

**ಸಂವತ್ಸರ ಚಂದಾ ೬ ರೂ.**

ಸಂಪುಟ 12] ಜೂನ್ 1981 [ಸಂಚಿಕೆ 1

ಗೌರವ ಸಂಪಾದಕರು ;
ಶ್ರೀ ಪಿ. ವಿ. ಆರ್. ಕೆ. ಪ್ರಸಾದ್, ಐ.ಎ.ಎಸ್.,
ಟೆಲಿಫೋನ್ ನಂಬರು: 2322

ಸಂಪಾದಕರು:
ಕೆ. ಸುಬ್ಬಾರಾವು, ಎಂ.ಎ.,
ಟೆಲಿಫೋನ್ ನಂಬರು; 2254

ಮುದ್ರಣ:
ಯಂ. ವಿಜಯಕುಮಾರ್‌ರೆಡ್ಡಿ
ಮೇನೆಜರ್, ತಿ. ತಿ. ದೇ. ಪ್ರೆಸ್, ತಿರುಪತಿ.
ಟೆಲಿಫೋನ್ ನಂಬರು; 2340

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ ಪ್ರೆಸ್ ಕಾಂಪೌಂಡ್
ತಿರುಪತಿ.



## ವಿಷಯಸೂಚಿ

# ಓದುಗರ ಓಲೆ

ಮಾನ್ಯರೆ,

ತಮ್ಮ ಈಗಿನ ಪತ್ರಿಕೆ ಹೊಸರೀತಿಯಲ್ಲಿ ಪ್ರಕಟವಾಗಿ ಸರ್ವ ಧರ್ಮಗಳವರಿಗೂ ಉಪಯುಕ್ತವಾಗಿದೆ. ಇದರ ಮಾರ್ಗವೂ ಕೂಡ ಸರ್ವ ಮಾನ್ಯವಾಗಿದೆ. ಓದಲು ವಿವಿಧ ವಿಷಯಗಳನ್ನೊಳಗೊಂಡು ಒಳ್ಳೆಯದಾಗಿದೆ. ಸರ್ವ ಪಂಥಗಳ ಶರಣರ, ದಾಸರ, ಭಕ್ತರ ಚರಿತ್ರೆಗಳೂ ಇದರಲ್ಲಿ ಬರಲಿ. ಎಲ್ಲ ತತ್ತ್ವಗಳೂ ಇದರಲ್ಲಿ ಪ್ರಕಟಿಸಲ್ಪಟ್ಟು ಇಡೀ ದೇಶದ ತುಂಬ ಪ್ರಸರಿಸಲ್ಪಡಲಿ ಎಂದು ಶ್ರೀವೆಂಕಟೇಶ್ವರನಲ್ಲಿ ಪ್ರಾರ್ಥಿಸುತ್ತೇನೆ.

ಸಂ. ಸ. ಸೋಮಾಪುರ,
ತಿಮ್ಮಾಪುರ.

ಮಾನ್ಯರೆ,

ಹಿಂದೂಧರ್ಮದ ಪ್ರಸಾರಕ್ಕೋಸ್ಕರ ಹಾಗೂ ವಿಶ್ವಕಲ್ಯಾಣಕ್ಕೋಸ್ಕರ ತಾವು ಹೊರಡಿಸುತ್ತಿರುವ ಸಪ್ತಗಿರಿ ಮಾಸ ಪತ್ರಿಕೆಯನ್ನು ನೋಡುತ್ತ ತುಂಬ ಸಂತೋಷವಾಗುತ್ತಿದೆ. ಏಪ್ರಿಲ್‌ನಲ್ಲಿ ಸರ್ವಜ್ಞ ಹಾಗೂ ವೇಮನರನ್ನು ಕುರಿತ ವಿಚಾರವನ್ನು ತುಲನಾತ್ಮಕವಾಗಿ ಪರಿಶೀಲಿಸಿರುವುದೂ ಮಾರ್ಚ್ ತಿಂಗಳಿನಲ್ಲಿ ಸತ್ಯದಾನ ಇಂದ್ರಿಯನಿಗ್ರಹಗಳ ಬಗ್ಗೆ ನೀಡಿರುವ ವಿವರಗಳೂ ಉತ್ತಮವಾಗಿವೆ. ಎಲ್ಲಕ್ಕಿಂತ ಮುಖ್ಯವಾಗಿ ಹೊಸದಾಗಿ ಸೇರಿಸಿರುವ "ನೀವು ಹಿಂದೂಗಳಾಗಿದ್ದೀರಿ ಹೆಮ್ಮೆ ಹೊಂದಿರಿ" ಎಂಬ ವಿಶೇಷ ಪುಟದ ಧರ್ಮಜಾಗರಣ ಕಾರ್ಯಕ್ರಮ ಹಮ್ಮಿಕೊಂಡದ್ದು ಒಂದು ಸಂತೋಷದ ವಿಚಾರವಾಗಿದೆ–ಮೇ ತಿಂಗಳಲ್ಲಿ ಆದಿಶಂಕರರ ವಿಚಾರ ಜೀವನಗಳನ್ನು ನೀಡುವಿರೆಂದು ನಂಬಿದ್ದೇನೆ.

ಸುಭಾಸ್ ವೆಂಟಗುಡಿ
ದೇವನಾಳ.

(ಮೇ ತಿಂಗಳ ಪತ್ರಿಕೆ ಈಗಾಗಲೇ ತಮ್ಮ ಕೈಸೇರಿ ಅಲ್ಲಿ ತಾವು ನಿರೀಕ್ಷಿಸಿದ 'ಶಂಕರ ವಿಚಾರ' ವನ್ನು ಓದಿ ಆನಂದಿಸಿರುವಿರೆಂದು ಭಾವಿಸಲಾಗಿದೆ–ಮುಂದಿನ ಸಂಚಿಕೆಯ ಪ್ರಮುಖ ಲೇಖನ ಸೂಚಿಯನ್ನು ಈ ತಿಂಗಳಿನಿಂದ ಪ್ರಕಟಿಸಲಾಗುವುದು.–ಸಂ॥)

---

## ಮುಂದಿನ ಸಂಚಿಕೆಯಲ್ಲಿ.... ಸಪ್ತಗಿರಿ **1981** ಜುಲೈ

| | | |
|---|---|---|
| ವಾಲ್ಮೀಕಿ ರಾಮಾಯಣದ ಮಹೋನ್ನತಿ | — | ಡಾ॥ ಕೆ. ಕೃಷ್ಣಮೂರ್ತಿ |
| ತಿರುಪತಿಯಲ್ಲಿ ಪುರಂದರದಾಸರು | — | ಡಾ॥ ಕೆ. ಸರ್ವೋತ್ತಮನ್ |
| ಶಬರಿ | — | ಮು. ಕೃಷ್ಣಪ್ಪ. |

ಜೊತೆಗೇ ಗೃಹಲಕ್ಷ್ಮಿ, ಕಿಶೋರ ಜಗತ್, ಯುವವಾಣಿ ಮೊದಲಾದ ಸ್ಥಿರ ಶೀರ್ಷಿಕೆಗಳು.

**ನಿಮ್ಮ ಪ್ರತಿಗಳನ್ನು ಕಾಯ್ದಿರಿಸಿ.**

# ರಾಮಾಯಣ ಮಹಾಭಾರತಗಳಲ್ಲಿ ಹಿಮಾಲಯ

ಡಾ॥ ಎನ್. ಅನಂತರಂಗಾಚಾರ್

ಪ್ರಪಂಚದಲ್ಲೆಲ್ಲ ಅತ್ಯಂತ ಬೃಹದಾಕಾರದ ಇತಿಹಾಸವೂ ಅತ್ಯಂತ ಉನ್ನತವಾದ ಪರ್ವತವೂ ಇರುವುದು ಭಾರತದಲ್ಲಿಯೇ ಎಂಬ ನಾಣ್ನುಡಿ ಭಾರತೀಯರಲ್ಲಿ ಬಹುಕಾಲದಿಂದಲೂ ಬಂದಿರುವ ಮೆಚ್ಚಿನ ಮಾತು. ಬೃಹದಾಕಾರದ ಇತಿಹಾಸ ಒಂದು ಲಕ್ಷಗ್ರಂಥ ಪರಿಮಿತಿಯುಳ್ಳ 'ಮಹಾಭಾರತ'. 'ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನತತ್ ಕ್ವಚಿತ್'–ಅಂದರೆ ಇಲ್ಲಿರುವ ವಿಷಯವು ಇತರಡೆಗಳಲ್ಲಿಯೂ ಸಿಕ್ಕುತ್ತದೆ. ಇಲ್ಲಿ ಇಲ್ಲದಿರುವುದು ಇನ್ನೆಲ್ಲಿಯೂ ಸಿಕ್ಕುವುದಿಲ್ಲ ಎಂಬುವುದು 'ಮಹಾಭಾರತ'ದ ವೈಶಿಷ್ಟ್ಯ. ಹಾಗೆಯೇ ಅತ್ಯುನ್ನತವಾದ ಪರ್ವತ ಸುಮಾರು ಮೂವತ್ತು ಸಾವಿರ ಅಡಿ ಎತ್ತರದ ಪ್ರಮಾಣವುಳ್ಳ ಹಿಮವತ್ಪರ್ವತವು ಸರ್ವದೃಷ್ಟಿಯಿಂದಲೂ ಬಹುಮಾನ್ಯವಾಗಿದೆ. ಈ ಪರ್ವತಕ್ಕಿರುವ ಪೂಜ್ಯತೆ, ಗೌರವ, ಪ್ರಾಮುಖ್ಯ, ಪ್ರಪಂಚದ ಮತ್ತಾವ ಪರ್ವತಕ್ಕೂ ಇಲ್ಲ. ಭರತಖಂಡಕ್ಕೆ ಉತ್ತರದಲ್ಲಿ ಶಿರೋಭೂಷಣಪ್ರಾಯವಾಗಿ ಉತ್ತರದಿಂದ ಬರುವ ಶೀತಮಾರುತಗಳಿಗೂ ದುರಾಕ್ರಮಣ ಮನೋಭಾವಜ್ಞರಾದ ಶತ್ರುಗಳಿಗೂ ಪ್ರತಿಬಂಧಕವಾಗಿ, ಭಾರತದ ಸಮಸ್ತ ಸಂಪತ್ತಿಗೂ ಆಗರವಾದ ಅನೇಕ ನದಿಗಳಿಗೆ ಮಾತೃಭೂಮಿಯಾಗಿ, ಭಾರತೀಯರ ಭೌಗೋಳಿಕ ಮತ್ತು ಆರ್ಥಿಕ ಪ್ರಗತಿಗೆ ಕಾರಣವಾಗಿರುವಂತೆಯೇ ಅವರ ಆಧ್ಯಾತ್ಮಿಕ ಜೀವನಕ್ಕೂ ಪರಿಪೋಷಕವಾದ ಪುಣ್ಯಭೂಮಿಯೂ ಆಗಿದೆ. ಇಲ್ಲಿಯವರೆಗೆ ಅದರ ಅನೇಕ ವೈಭವವನ್ನು ಕೊಂಡಾಡದವರಿಲ್ಲ. ಅದು ಭರತಖಂಡದ ಅವಿಭಾಜ್ಯ ಅಂಗವಾಗಿದೆ.

ವೇದಪುರಾಣಗಳಲ್ಲಿ ಹಿಮವತ್ಪರ್ವತದ ವರ್ಣನೆಯೂ ಸ್ತೋತ್ರವೂ ಅಲ್ಲಲ್ಲಿ ಬರುತ್ತದೆ. ಇತಿಹಾಸಗಳಾದ 'ರಾಮಾಯಣ', 'ಮಹಾಭಾರತ'ಗಳಲ್ಲಿ ಅದರ ವೈಭವವು ಮತ್ತಷ್ಟು ವಿಸ್ತೃತವಾಗಿದೆ. ರಾಮಾಯಣದ ಪ್ರಕಾರ ಅದು ಬಹುಪೂಜ್ಯವಾದ ಸ್ಥಾನ. ನಾರದರು ತಪಸ್ಸು ಮಾಡುತ್ತಿದ್ದುದಲ್ಲಿ. ವಿಶ್ವಾಮಿತ್ರರು ಬ್ರಹ್ಮಋಷಿಯಾಗುವುದಕ್ಕೆ ನಾಲ್ಕನೆಯ ಸಲ ಅಲ್ಲಿಯೇ ಉಗ್ರತಪಸ್ಸನ್ನಾಚರಿಸಿದರು. ಇಂದ್ರನ ದುರಾಚಾರಕ್ಕೆ ಶಾಪಗೊಟ್ಟು ಗೌತಮರು ಏಕಾಂತವಾಗಿ ತಪಸ್ಸುಮಾಡುವುದಕ್ಕೆ ಹಿಮವತ್ಪರ್ವತಕ್ಕೆ ತೆರಳಿದರು. ಭಗೀರಥನು ತನ್ನ ಪಿತೃಗಳನ್ನು ಉದ್ಧಾರ ಮಾಡುವುದಕ್ಕಾಗಿ ಅವನ ಪ್ರಾರ್ಥನೆಯಂತೆ ಭೂಲೋಕಕ್ಕಿಳಿದ ದೇವಗಂಗೆಯು ಶಿವನ ಜಡೆಯಲ್ಲಿ ತಂಗಿ ಜಹ್ನುವಿನ ಕಿವಿಯಿಂದಿಳಿದು ಹಿಮಾಲಯದ ಬಿಂದುಸರವನ್ನು ಸೇರಿ ಅಲ್ಲಿಂದ ಹ್ಲಾದಿನಿ, ಪ್ಲಾವನಿ, ನಳಿನಿ, ಸುಚಕ್ಷು, ಸಿಂಧು ಸೀತಾ, ಭಾಗೀರಥೀ ಎಂಬ ಏಳುನದಿಗಳಾಗಿ ಪ್ರವಹಿಸಿದಳು. ಭಾಗೀರಥಿಯೇ ತ್ರಿಪಥಗಾ, ಅಲಕನಂದ, ಗಂಗಾ ಎಂಬ ನಾಮಧೇಯದಿಂದ ಪ್ರಖ್ಯಾತಳಾದಳು. ಈ ಗಂಗೆಯೇ ಹಿಮವಂತನ ಜ್ಯೇಷ್ಠ ಪುತ್ರಿ. ದ್ವಿತೀಯಪುತ್ರಿಯಾದ ಉಮಾದೇವಿಯು ಶಂಕರನನ್ನು ವರಿಸಿದಳು. ಗಂಗೆಯು ವಿಷ್ಣುಪಾದ ಪರಿಭ್ರಷ್ಟಳೂ ಭವಾಂಗ ಪತಿತಳೂ ಆದುದರಿಂದ ಪೃಥ್ವಿಯ ಕಲ್ಮಷವನ್ನು ನಿರ್ಮೂಲಮಾಡುವಳಾಗಿದ್ದಾಳೆ. ಆದುದರಿಂದಲೇ ಹಿಮವತ್ಪರ್ವತದ ತಪ್ಪಲಲ್ಲಿ ಎಲ್ಲ ಸಿದ್ಧರೂ ಕಿಂಪುರಷರೂ ಸರ್ವದಾ ಸೇವೆ ಮಾಡುತ್ತಿದ್ದಾರೆ. ಅಲ್ಲಿಯ ಶಾಂತವಾತಾವರಣವೂ ಎಲ್ಲರನ್ನೂ ಆಕರ್ಷಿಸುತ್ತದೆ. ಸೀತಾನ್ವೇಷಣಕ್ಕೆ ಉತ್ತರದ ಕಡೆಗೆ ಕಪಿಸೈನ್ಯವನ್ನು ಕಳುಹಿಸಿದ ಸುಗ್ರೀವನು ಹಿಮಾಚಲದ ಪರಿಸರವನ್ನೂ ಸ್ಪಷ್ಟವಾಗಿ ತಿಳಿಸುತ್ತಾನೆ. ತರುಷ್ಕ ಶೂರಸೇನ, ಪ್ರಸ್ಥಲ, ಭರತ, ಮದ್ರ, ಕುರು, ಯವನ, ಕಾಂಭೋಜ, ಶಕ, ಆರಟ್ಟ, ಪಾರವ, ಋಷಿಕ, ಟಂಕಣ, ಚೀನ, ಪರಮಚೀನ, ನೀಹಾರ, ದರದ, ಎಂಬೀ ರಾಷ್ಟ್ರಗಳ ಮುಂದೆ ಹಿಮಪರ್ವತವಿದೆ. ಅದರ ಸಮೀಪದಲ್ಲಿಯೇ ಕರಾಳ ಮತ್ತು ದೇವಸಖಗಳೆಂಬ ಪರ್ವತಗಳಿವೆ. ಅವುಗಳ ಉತ್ತರಕ್ಕೆ ಬಹುಸುಂದರವಾದ ಕೈಲಾಸಪರ್ವತವಿದೆ. ಇದು ಮಹದೈಶ್ವರ್ಯ ಸಮೃದ್ಧಿಯಿಂದ ಕೂಡಿರುವುದರಿಂದಲೂ ಅತಿಶಾಂತಿಮಯವಾಗಿರುವುದರಿಂದಲೂ, ವೈಖಾನಸರೂ ವಾಲಖಿಲ್ಯರೂ ಮಹರ್ಷಿಗಳೂ ಇಲ್ಲಿಯೇ ಸರ್ವದಾ ವಾಸಮಾಡುವರು. ಅದರ ಪಕ್ಕದಲ್ಲಿಯೇ ಕ್ರೌಂಚ ಮೈನಾಕ ಪರ್ವತಗಳಿರುವುವು. ಅಲ್ಲದೆ ಸಮಸ್ತ ರೋಗರುಜಿನಗಳನ್ನೂ ನಿವಾರಿಸುವ ಪ್ರಾಣದಾತೃಗಳಾದ ಅನೇಕ ಔಷಧಿಗಳಿರುವುದೂ ಹಿಮವತ್ಪರ್ವತದಲ್ಲಿಯೇ. ಅದಕ್ಕಾಗಿಯೇ ಜಾಂಬವಂತನು ಲಕ್ಷ್ಮಣನನ್ನು ನಿರುಜನನ್ನಾಗಿ ಮಾಡುವುದಕ್ಕಾಗಿ ಔಷಧಿಪರ್ವತವನ್ನು ತರಲು ಹನುಮಂತನನ್ನು ಅಲ್ಲಿಗೆ ಕಳುಹಿಸಿದುದು. ಅಲ್ಲಿಯ ಉತ್ತಮೋತ್ತಮ ಸನ್ನಿವೇಶದ ವರ್ಣನೆಯು ಮುಂದಿನ ಶ್ಲೋಕಗಳಲ್ಲಿ ಸ್ಪಷ್ಟೀಕೃತವಾಗಿವೆ.



ಪರ್ವತ – ಸರೋವರ ಚಿತ್ರ: ಕೆ. ಜೆ. ಗೌರಿ

ದದರ್ಶ ಸಹಸಾಗತ್ವಾ
ಹಿಮವಂತಂ ಮಹಾ ಕಪಿಃ
ನಾನಾ ಪ್ರಸ್ರವಣೋಪೇತಂ
ನಾನಾ ಕಂಧರ ನಿರ್ಝರಂ
ಶ್ವೇತಾಭ್ರ ಚಯಸಂಕಾಶೈಃ
ಶಿಖರೈಶ್ಚಾರು ದರ್ಶನೈಃ
ಶೋಭಿತಂ ವಿವಿಧೈರ್ವೃಕ್ಷೈಃ
ಅಗಮತ್ಪರ್ವತೋತ್ತಮಂ
ಸತಂ ಸಮಾಸಾದ್ಯ ಮಹಾನಗೇಂದ್ರಂ
ಅತಿ ಪ್ರವೃದ್ಧೋತ್ತಮಂ ಘೋರಶೃಂಗಂ
ದದರ್ಶಪುಣ್ಯಾನಿ ಮಹಾಶ್ರಮಾಣಿ ಸುರರ್ಷಿ
ಸಂಘೋತ್ತಮ ಸೇವಿತಾನಿ
ಸಬ್ರಹ್ಮಕೋಶಂ ರಜತಾಲಯಂಚ
ಶಕ್ರಾಲಯಂ ರುದ್ರಶರ ಪ್ರಮೋಕ್ಷಂ
ಹಯಾನನಂ ಬ್ರಹ್ಮಶಿರಶ್ಚದೀಪ್ತಂ
ದದರ್ಶ ವೈವಸ್ವತ ಕಿಂಕರಾಂಶ್ಚ
ವಜ್ರಾಲಯಂ ವೈಶ್ರವಣಾಲಯಂಚ
ಸೂರ್ಯ ಪ್ರಭಂ ಸೂರ್ಯನಿಬಂಧನಂಚ
ಬ್ರಹ್ಮಾಸನಂ ಶಂಕರ ಕಾರ್ಮುಕಂಚ
ದದರ್ಶನಾಭಿಂಚ ವಸುಂಧರಾಯಾಃ
ಕೈಲಾಸಮಾಗ್ರ್ಯಂ ಹಿಮವಚ್ಛಿಲಾಂಚ
ತಥರ್ಷಭಂ ಕಾಂಚನಶೈಲಮಗ್ರ್ಯಂ
ಸಂದೀಪ್ತ ಸರ್ವೌಷಧಿ ಸಂಪ್ರದೀಪ್ತಂ
ದದರ್ಶಸರ್ವೌಷಧಿ ಪ್ರರ್ವತೇಂದ್ರಂ'

(ಕಪಿಶ್ರೇಷ್ಠನಾದ ಹನುಮಂತನು ಹಿಮಾಲಯ ಪರ್ವತವನ್ನು ಕಂಡನು. ಅಲ್ಲಿ ಅನೇಕ ಗಿರಿನದಿಗಳು ಹರಿಯುತ್ತಿದ್ದವು. ಗುಹೆಗಳೂ ಚಿಲುಮೆಗಳು ಬಹು ಸಂಖ್ಯೆಯಲ್ಲಿದ್ದುವು. ಬಿಳಿಯ ಮೋಡಗಳನ್ನು ಪೇರಿಸಿದ್ದಂತೆ ಹಿಮಾಲಯ ಶಿಖರಗಳು ಮನೋಜ್ಞವಾಗಿ ಕಂಗೊಳಿಸುತ್ತಿದ್ದವು. ನಾನಾ ಜಾತಿಯ ವೃಕ್ಷಗಳು ಶೋಭಿಸುತ್ತಿದ್ದುವು- ಅತ್ಯುನ್ನತವಾದಸು ವರ್ಣ ಶೃಂಗದಿಂದ ವಿರಾಜಿಸುತ್ತಿದ್ದ ಆ ಮಹಾಶೈಲವನ್ನು ಸೇರಿ ದೇವರ್ಷಿಗಳಿಂದ ಸೇವಿತವಾದ ಪುಣ್ಯಾಶ್ರಮಗಳನ್ನು ಹನುಮಂತನು ಕಂಡನು. ಬ್ರಹ್ಮಕೋಶವೆಂಬ ಹಿರಣ್ಯಗರ್ಭ ಸ್ಥಾನ, ರಜತಾಲಯವೆಂಬ ರಜತನಾಭಿಸ್ಥಾನ, ಇಂದ್ರನ ಆಶ್ರಮಸ್ಥಾನ, ರುದ್ರಶರಪ್ರಮೋಕ್ಷಸ್ಥಾನ, ಹಯಗ್ರೀವಸ್ಥಾನ, ಬ್ರಹ್ಮ ಕಪಾಲಸ್ಥಾನಗಳನ್ನೂ, ಸೇವಾರ್ಥವಾಗಿ ಬಂದಿದ್ದ ಯಮಕಿಂಕರರನ್ನೂ ಹನುಮಂತನು ನೋಡಿದನು. ಬ್ರಹ್ಮನು ಇಂದ್ರನಿಗೆ ವಜ್ರಾಯುಧವನ್ನು ಕೊಟ್ಟ ಸ್ಥಾನ ಕುಬೇರಸ್ಥಾನ, ಸೂರ್ಯನಂತೆ ಬೆಳಗುತ್ತಿದ್ದ ಸೂರ್ಯಸ್ಥಾನ, ಚತುರ್ಮುಖಸ್ಥಾನ, ಪಿನಾಕವೆಂಬ ಶಿವಧನುಸ್ಸಿನ ಸ್ಥಾನ ಮತ್ತು ಭೂನಾಭಿಯೆಂಬ ಪ್ರಜಾಪತ್ಯಸ್ಥಾನಗಳನ್ನು ಹನುಮಂತನು ಅವಲೋಕಿಸಿದನು. ಅಲ್ಲದೆ ದುರ್ಧರ್ಷವಾದ ಕೈಲಾಸ ಈಶ್ವರನ ತಪಃಪೀಠವಾದ ಶಿಲಾತಲ. ಇವುಗಳನ್ನು ನೋಡುತ್ತಾ ಕಾಂಚನ ಶೈಲವೆನಿಸಿದ ಋಷಭಾಚಲವನ್ನು ನೋಡಿದನು. ಮಧ್ಯೆ ಸಮಸ್ತ ದಿವ್ಯೌಷಧಿಗಳ ಪ್ರಭೆಯಿಂದ ಪ್ರಕಾಶಿಸುತ್ತಿದ್ದ ಓಷಧಿಪರ್ವತವನ್ನು ನೋಡಿದನು.)

ಹಿಮವತ್ಪರ್ವತದ ವರ್ಣನೆ ರಾಮಾಯಣಕ್ಕಿಂತ ಮಹಾಭಾರತದಲ್ಲಿ ಹೆಚ್ಚು ಅವಕಾಶವಿರುವುದರಿಂದ ಅಲ್ಲಿಯ ವರ್ಣನೆಗಳು ಇನ್ನೂ ವಿಶದವಾಗಿರುವುವು. ಅರ್ಜುನನು ವನವಾಸದಲ್ಲಿದ್ದಾಗ ಈಶ್ವರನಿಂದ ಪಾಶುಪತಾಸ್ತ್ರವನ್ನು ಪಡೆಯಲು ತಪಸ್ಸಿಗಾಗಿ ಹಿಮವತ್ಪರ್ವತಕ್ಕೆ ಹೋಗುವನು. ಅಲ್ಲಿಯ ವಾತಾವರಣ ಬಹು ಆಹ್ಲಾದಕರವಾಗಿರುತ್ತದೆ. ಆ ಪರ್ವತದ ತಪ್ಪಲಿನ ಪ್ರದೇಶ ಬಹುರಮಣೀಯವಾಗಿದೆ. ಮರಗಳೆಲ್ಲ ಚಿಗುರಿವೆ. ಹೂವುಗಳೆಲ್ಲ ಅರಳಿವೆ. ನದಿಗಳೆಲ್ಲ ಸುಳಿಗಳಿಂದ ಕೂಡಿ ವೈಡೂರ್ಯವಿಮಲಛಾಯೆಯುಳ್ಳದ್ದಾಗಿವೆ. ಹಂಸ ಸಾರಸ, ಮಯೂರ ಕೋಗಿಲೆಗಳು ಗಂಭೀರನಾದದಿಂದ ಕುಣಿಯುತ್ತಿವೆ. ಪುಣ್ಯವೂ ಶೀತಲವೂ ಸ್ವಚ್ಛವೂ ಆದ ನಿರ್ಮಲೋದಕವಿದೆ. ಪುಣ್ಯ ಕರ್ಮರೂ ಸದಾಶ್ರಯರೂ ಆದ ಋಷಿಗಳು ಶಾಂತ ಸುಖಗಳನ್ನನುಭವಿಸುತ್ತಿದ್ದಾರೆ. ಅಲ್ಲಿಯ ಫಲಗಳು ಮಧುರವಾದುವು. ವಾಯುವು ಸುಗಂಧಮಯವಾದುದು. ಅಪ್ಸರರಿಂದ ಸಂಕೀರ್ಣವಾಗಿದೆ. ಬ್ರಹ್ಮಘೋಷಪೂರಿತವಾಗಿದೆ ಅಲ್ಲಿಯ ರಮಣೀಯವಾದ ಪ್ರದೇಶಗಳಲ್ಲಿ ಅರ್ಜುನನು ತಪಸ್ಸುಮಾಡಿ ಶಂಕರನನ್ನು ತೃಪ್ತಿಪಡಿಸಿ ಅವನಿಂದ ಪಾಶುಪತಾಸ್ತ್ರವನ್ನು ಪಡೆಯುತ್ತಾನೆ.

ಪಾಂಡವರು ವನವಾಸಕಾಲದಲ್ಲಿ ಚೈತ್ರಯಾತ್ರೆಗಾಗಿ ಹೊರಟು ಅರ್ಜುನನ್ನು ಹುಡುಕಿಕೊಂಡು ಯಧಿಷ್ಠಿರಾದಿಗಳು ಘಟೋತ್ಕಚನ ಸಹಾಯದಿಂದ ಉತ್ತರದಲ್ಲಿರುವ ಹಿಮಾಚಲಾಭಿಮುಖವಾಗಿ ನಡೆದು ಗಂಧಮಾದನ ಪರ್ವತಕ್ಕೆ ಹೋಗಿ ಬದರಿಕಾಶ್ರಮವನ್ನು ಪ್ರವೇಶಿಸಿ, ನರನಾರಾಯಣಾಶ್ರಮದಲ್ಲಿ ಕೆಲವು ದಿನವಿದ್ದು, ಗಂಗಾನದಿಯನ್ನು ಸಂಧಿಸಿ ಸಂತೋಷಿಸುವರು. ಈ ಸಂದರ್ಭದಲ್ಲಿ ಬರುವ ಹಿಮಾಚಲವರ್ಣನೆಯು ಬಹುಚಿತ್ತಾಕರ್ಷಣೀಯವಾಗಿದೆ. ಗಂಧಮಾದನ ಪರ್ವತವು ಹಿಮಾಚಲದ ಪ್ರಾರಂಭದಲ್ಲಿಯೇ ಸಿಕ್ಕುವುದು. ಇಲ್ಲಿಯ ತಪ್ಪಲು ಪ್ರದೇಶಗಳು ನಾನಾರತ್ನಗಳಿಗೆ ಆಗರವಾಗಿವೆ- ಅನೇಕ ಗುಹೆಗಳಿಂದ ಪೂರ್ಣವಾಗಿದೆ. ನಾನಾಸರ್ಪಗಳಿಂದ ಅಲಂಕೃತವಾಗಿವೆ. ಗಂಧರ್ವ, ವಿದ್ಯಾಧರ, ಕಿನ್ನರ, ಕಿಂಪುರುಷರ ಕ್ರೀಡಾಗಾರವಾಗಿದೆ. ವರಾಹ, ವಾನರ, ಮಹಿಷ, ಗಜ ಪಂಕ್ತಿಗಳಿಂದ ಶೋಭಾಯಮಾನವಾಗಿವೆ. ಮದಮತ್ತವಾದ ಪಕ್ಷಿನಾದದಿಂದ ಧ್ವನಿಯುಕ್ತವಾದುದೂ, ಅವಿರಲ ವರ್ಣವಿಸ್ಮೃತವಾದುದೂ, ಬಹುಶಾಖಾಯುತವಾದದೂ ಆದ ವೃಕ್ಷಗಳಿಂದ ಕೂಡಿದುದೂ ಆದ ಬಹ್ವಾಶ್ಚರ್ಯಯುತವಾದುದೂ, ಆದ ಕೈಲಾಸಪರ್ವತವು ಮುಂದೆಯೇ ಇದೆ. ಅದರ ಪಕ್ಕದಲ್ಲಿಯೇ ನರನಾರಾಯಣಾಶ್ರಮವಿರುವುದು. ಇದಂತೂ ಸರ್ವಕಾಲದಲ್ಲಿಯೂ ಫಲಪುಷ್ಪಗಳಿಂದಲೂ ಮಹರ್ಷಿಗಣಗಳಿಂದಲೂ ಪರಿಪೂರ್ಣವಾಗಿ ನೀಲಶಾದ್ವಲ ಸಂಛನ್ನವಾಗಿದೆ. ಕಂಟಕೋಪಘಾತವಿರಹಿತವಾಗಿದೆ. ಹಿಮವೃದು ಸ್ಪರ್ಶವುಳ್ಳದ್ದಾಗಿದೆ. ಕ್ಷುತ್ತೃಷ್ಣ ದೋಷಗಳಿಂದ ವರ್ಜಿತವಾಗಿದೆ. ಹರಿಣಗಳು ಚಪಲಾಪಾಂಗಗಳಿಂದ ಹರಿಣಿಗಳನ್ನು ನೋಡುತ್ತಿವೆ. ಈ ನರನಾರಾಯಣಸ್ಥಾನಕ್ಕೆ 'ಬದರೀ' ಎಂಬ ಹೆಸರು ಪ್ರಸಿದ್ಧವಾಗಿದೆ. ಇಲ್ಲಿಯೇ ಬಹುಪುಷ್ಪಫಲ ರಮ್ಯವಾದ ವೃಷಪರ್ವಋಷಿಯ ಆಶ್ರಮವಿರುವುದು. ಅದನ್ನೂ ದಾಟಿ ಮುಂದೆ ನಡೆದರೆ ಆರ್ಷಿಷೇಣಾಶ್ರಮವು ಸಿಕ್ಕುವುದು. ಅಲ್ಲಿಂದಮುಂದೆ ಶ್ವೇತ ಪರ್ವತವೂ ಕೈಲಾಸಶಿಖರವೂ ಕಣ್ಣಿಗೆ ಬೀಳುವುವು. ಇವು ಪುಣ್ಯತಮವೂ ಪವಿತ್ರವೂ ಆದ ತೀರ್ಥಕ್ಷೇತ್ರಗಳು. ಕಮಲ ಕಲ್ಹಾರನೀಲೋತ್ಪಲಾದಿ ಕುಸುಮಗಳು ಸದಾ ಕುಸುಮಿತವಾಗಿ ಅಲ್ಲಿಯ ಸರೋವರಗಳ ಅಂದವನ್ನು ಸಂಪತ್ಸಮೃದ್ಧವನ್ನಾಗಿ ಮಾಡಿವೆ. ಈ ಪರ್ವತಗಳ ಮಧ್ಯಭಾಗದಿಂದಲೇ ದೇವ ಗಂಗಾನದಿಯು ಗೋಚರವಾಗಿ ಜಗತ್ಪಾವನ ಮಾಡುವುದು. ಅರ್ಜುನನೂ ಅವನ ಸಹೋದರರೂ ಈ ಪ್ರಾಂತಗಳಲ್ಲೆಲ್ಲ ಯಥೇಚ್ಛೆಯಿಂದ ಸಂಚರಿಸಿ ಸಂತೃಪ್ತರಾಗಿ ಪುನೀತರಾಗುವರು.

ಪಾಂಡವರ ಕಾಲದಿಂದ ಇಲ್ಲಿಯವರೆಗೆ ಯುಗಯುಗಗಳೇ ಮರಳಿದ್ದರೂ ಹಿಮಾಲಯಾ ಪರ್ವತದ ಮೋಹಕತೆಯೂ ಪಾವಿತ್ರ್ಯವೂ ಉಪಯೋಗವೂ ಸ್ವಲ್ಪವೂ ಕಡಿಮೆಯಾಗದೆ ಅನಂತಕಾಲ ವ್ಯಾಪಿಯಾಗಿದೆ, ಅದರ ಸೌಂದರ್ಯದಿಂದ ಮುಗ್ಧರಾಗದ ಕವಿವೃಷಭರಿಲ್ಲ. ಅದರ ರಹಸ್ಯಭೇದನದಲ್ಲಿ ತೊಡಗದ ವಿಜ್ಞಾನಿಯಿಲ್ಲ. ಅದರ ಉಪಯೋಗವನ್ನು ಗಳಿಸಲು ಯತ್ನಿಸದ ರಾಜನೀತಿಜ್ಞನಿಲ್ಲ. ಅದರ ಆಧ್ಯಾತ್ಮಿಕಗುಣವನ್ನು ಗ್ರಹಿಸಿದ ಋಷಿಗಣವಿಲ್ಲ. ಹೀಗಿರುವಲ್ಲಿ ಮಹಾಕವಿಕಾಳಿದಾಸನು ತನ್ನ 'ಕುಮಾರಸಂಭವ'ದ ಮೊದಲನೆಯ ಸರ್ಗವನ್ನು ಹಿಮಾಲಯದ ವರ್ಣನೆಗೇ ಮೀಸಲಾಗಿಟ್ಟು ಅದನ್ನ ಪೃಥ್ವಿಯ ಮಾನದಂಡವೆಂದು ಕರೆದಿರುವುದರಲ್ಲಿ ಆಶ್ಚರ್ಯವೇನು ?

★

# ಕುಮಾರ ವಾಲ್ಮೀಕಿಯ ಶ್ರೀರಾಮ

ಡಾ|| ಟಿ. ವಿ. ವೆಂಕಟಾಚಲ ಶಾಸ್ತ್ರೀ

"ಸಹಸ್ರನಾಮದ ಸರಿ ಕಣಾ ರಘುರಾಮಚಂದ್ರನ ಪರಮಮಂಗಳನಾಮ; ನಿರುಪಮ ನಿಗಮ ವಿಶ್ರಾಮ; ನಿರುತವಿದು" ಎಂಬುದಾಗಿ ತೊರವೆ ರಾಮಾಯಣದ ಕವಿ ಕುಮಾರ ವಾಲ್ಮೀಕಿ ತನ್ನ ಕೃತಿಯ ಆರಂಭದಲ್ಲೇ ಘೋಷಿಸಿದ್ದಾನೆ. ಶ್ರೀರಾಮಚಂದ್ರನ ಉದ್ದಾಮ ಚರಿತ್ರೆಯನ್ನು ಪಾರ್ವತಿಯೇ ಪರಶಿವನಿಂದ ಕೇಳಲು ಬಯಸಿದಳಂತೆ!

ಮಾಯೆಯೇ ಮಂಥರೆಯಾಗಿ, ಫಣಿರಾಯ ಲಕ್ಷ್ಮಣನಾಗಿ, ನಾರಾಯಣನೇ ಶ್ರೀರಾಮನಾಗಿ ದೇವತೆಗಳೂ ದಿಕ್ಪಾಲರೂ ವಾನರರಾಗಿ, ಸಂಘಟಿಸಿದ ರಾಮಾವತರಣದ ಉದ್ದೇಶ "ಮೇದಿನಿಯ ಭಾರಾಪಹರಣ ವಿನೋದ". ಹರಿ "ನಾಡಾಡಿಗಳ ನರನಂತೆ" ದಶರಥನ ಅರಮನೆಯಲ್ಲಿ ಬೆಳೆದ. ಅವನಿಗೆ ವಸಿಷ್ಠರಿಂದ ವೇದಶಾಸ್ತ್ರಗಳ ಅಭ್ಯಾಸವಾಯಿತು; ಅಸ್ತ್ರಶಸ್ತ್ರಗಳನ್ನು ಕಲಿತದ್ದೂ ಆಯಿತು. ಈಗ ರಾಮನಿಗೆ ಹನ್ನೆರಡು ವರ್ಷಗಳ ವಯಸ್ಸು. ಕೌಶಿಕಮುನಿ ಯಜ್ಞ ರಕ್ಷಣೆಗೆ ರಾಮನನ್ನು ಕಳಿಸುವಂತೆ ದಶರಥನನ್ನು ಕೋರಿದ. "ಎಷ್ಟೋ ಕಾಲದ ಮೇಲೆ ಮಕ್ಕಳ ಮುಖ ನೋಡುತ್ತಿದ್ದೇನೆ, ರಾಕ್ಷಸರ ಬಾಯಿಗೆ ಮಗುವನ್ನು ಹೇಗೆ ಒಪ್ಪಿಸಲಿ" ಎಂಬುದಾಗಿ ಅವನು ಹಲುಬಿದ. "ಮಗ ಎಂಬುದು ಭ್ರಾಂತಿ, ರಾಮ ಮತ್ಸ್ಯಾದಿ ಲೀಲಾವತಾರಿ" ಎಂದು ಅವರು ತಿಳಿಸಿದಾಗ, ವಸಿಷ್ಠರೂ ಸಮ್ಮತಿಸಿದಾಗ, ರಾಮ ಲಕ್ಷ್ಮಣರು ಮುನಿಯನ್ನು ಹಿಂಬಾಲಿಸಿದರು.

ಅಡವಿಯಲ್ಲಿ ಎದುರಾದ ತಾಟಕಿ, ಹೆಂಗಸೆಂದು ರಾಮ ಕೊಲ್ಲಲಿಲ್ಲ; "ಕಂಟಕರನ್ನು ಕೊಲ್ಲುವುದೇ ರಾಜನೀತಿ" ಎಂದು ವಿಶ್ವಾಮಿತ್ರ ತಿಳಿಸಿದಾಗ, ಕೊಂದುಹಾಕಿದ. ಯಜ್ಞ ರಕ್ಷಣೆಯ ಸಂದರ್ಭದಲ್ಲಿ ಸುಬಾಹುವನ್ನು ವಧಿಸಿದರೂ ತಾಪಸವೇಷದ ಮಾರೀಚನನ್ನು ಉಳಿಸಿದ. "ಸಾತ್ತ್ವಿಕವೇಷದಲ್ಲಿ ಬಂದವನು ಕೇಡಿಯೇ ಆದರೂ ಕೊಲ್ಲುವುದು ತರವಲ್ಲ" ಎಂದು ಅವನ ಎಳೆಯ ಮನಸ್ಸು ಕೂಡ ಚಿಂತಿಸಿತು.

ಈಗ ಅಯೋಧ್ಯೆಗೆ ಪ್ರಯಾಣ; ನಡುವೆ ನದಿ ನಗರಗಳ ಸಂದರ್ಶನ. ಗೌತಮಾಶ್ರಮದ ಬಳಿಗೆ ಬಂದಾಗ, ರಾಮಾಂಘ್ರಿಯ ಪಾದದ ಧೂಳಿ ಕವಿದು ಮುನಿಶಾಪದಿಂದ ಕಲ್ಲಾಗಿದ್ದ ಅಹಲ್ಯೆ ಮುಕ್ತಳಾದಳು. ಮಿಥಿಲೆಯಲ್ಲಿ ಶಿವಧನುವನ್ನು ಹೆದೆಯೇರಿಸಿ, ಜಗನ್ಮಾತೆ ಸೀತೆಯನ್ನು ವರಿಸಿದ ಆತ, ಬಾಲನಲ್ಲ; "ನರನಾಟಕದ ಸಿರಿಲೋಲ".

ಸೀತಾಕಲ್ಯಾಣ ಮುಗಿಯಿತು. ಎಲ್ಲರೂ ಸಪರಿವಾರವಾಗಿ ಅಯೋಧ್ಯೆಗೆ ಮರಳುವಾಗ ಪರಶುರಾಮ ಎದುರಾದ. ಹೋರಾಟದ ಹೊಗೆ ಮಸಗಿತು. ತಪಸ್ಸಿಗೆ ತೆರಳುವುದೇ ಸೂಕ್ತವೆಂದು ಶ್ರೀರಾಮ ಭಾರ್ಗವರಾಮನಿಗೆ ಸಲಹೆಮಾಡಿದ. ಸನ್ನಿವೇಶದ ಅರಿವಾಗಿ, ಆತ ತನ್ನ ಬಿಲ್ಲುಬಾಣಗಳನ್ನು ರಾಮನಿಗೆ ಒಪ್ಪಿಸಿ ಹೊರಟುಹೋದ.

ಮತ್ತೆ ಹನ್ನೆರಡು ವರ್ಷಗಳು ಕಳೆದುವು. ಶ್ರೀರಾಮನ "ನಡವಳಿಯ ನೀತಿಯ ನಿರ್ವಿಕಾರತೆ" ದಶರಥನಿಗೆ ಮೆಚ್ಚಾಗಿ, ಅವನು ಯುವರಾಜನಾಗಿದ್ದ ರಾಮನನ್ನು ಅಧಿರಾಜನನ್ನಾಗಿ ಮಾಡಲು ಆಲೋಚಿಸಿದ. ಆದರೆ ಮಂಥರೆಯ ಕುತಂತ್ರ ಇದಕ್ಕೆ ಅಡ್ಡಿ ಬಂತು. ಅರಮನೆಯಲ್ಲಿ ಆಪ್ತರಿಗೆಲ್ಲ ಅಂತಸ್ತಾಪ ಮಸಗಿತು. ಆಗ ರಾಮನೇ "ಭರತ ರಾಜ್ಯವಾಳಲಿ, ಕೈಕೆ ವಿಧಿಸಿದಷ್ಟು ಕಾಲ ತಾನು ಅರಣ್ಯಕ್ಕೆ ಹೋಗಲು ಸಿದ್ಧ" ಎಂಬುದಾಗಿ ತನ್ನ ನಿರ್ಣಯ ತಿಳಿಸಿದ. ತಾಯಿ ಕೌಸಲ್ಯೆ ಖಿನ್ನಳಾದಾಗ, ತಮ್ಮ ಲಕ್ಷ್ಮಣ ಕ್ರುದ್ಧನಾದಾಗ, "ಪಿತನ ಸತ್ಯದ ಸೊಮ್ಮುಗಳೆದರೆ ಬಳಿಕ ಬಹುದಪಕೀರ್ತಿ" ಎಂದು ಸ್ಪಷ್ಟವಾಗಿ ಸಾರಿದ. ಲಕ್ಷ್ಮಣನು ತನ್ನೊಂದಿಗೆ ಕಾಡಿಗೆ ಬರುವುದಾಗಿ ತಿಳಿಸಿದಾಗ, "ಭರತ ಊರಲ್ಲಿ ಇಲ್ಲದಿರುವಾಗ, ತಂದೆ ಕಳವಳಿಸುತ್ತಿರುವಾಗ, ಬರುವುದು ಸರಿಯಲ್ಲ" ಎಂದು ಹೇಳಿದ. "ತನ್ನ ಬಗ್ಗೆ ಚಿಂತೆ ಬೇಡ, ಭರತನಿಗೆ ಆಧಿಪತ್ಯ ವಹಿಸುವುದಾಗಲಿ" ಎಂದು ತಂದೆಗೆ ಸ್ಪಷ್ಟವಾಗಿ ತಿಳಿಸಿದ. ತನ್ನ ಜೊತೆಗೆ ಬರಲು ಸೀತೆ ಬಯಸಿದಾಗ, "ವನವಾಸ ನಿನ್ನಿಂದ ಸಾಧ್ಯವಾಗದು" ಎಂದು ತಿಳಿಯಹೇಳಿದ. ಆದರೆ ಸೀತೆಯೂ ಲಕ್ಷ್ಮಣನೂ ಬಿಡದೆ ರಾಮನನ್ನು ಹಿಂಬಾಲಿಸಿ ಕಾಡಿಗೆ ನಡೆದರು. ಕಾಡಿನ ಕಟುತರವಾದ ವಾಸದಲ್ಲಿಯೂ ತಂದೆ ತಾಯಂದಿರ ನೆಮ್ಮದಿಯ ಚಿಂತೆಯೇ ರಾಮನನ್ನು ಬಾಧಿಸುತ್ತಿತ್ತು.

ಕಾಡಿನಲ್ಲಿ ನಡೆಯುವಾಗ ಸೀತೆಯ ಆಯಾಸವನ್ನಾಗಲಿ, ಕ್ಲೇಶವನ್ನಾಗಲಿ ಪರಿಹರಿಸಲಾಗದ ತನ್ನ ನಿಸ್ಸಹಾಯಕತೆಗೆ ಶ್ರೀರಾಮ ತುಂಬ ಮರುಕಪಟ್ಟನು. ಪ್ರಕೃತಿಯ ರೂಪ ವೈಚಿತ್ರ್ಯಗಳನ್ನು ತೋರಿಸಿ, ಅವಳನ್ನು ಸಮಾಧಾನಪಡಿಸಲು ಯತ್ನಿಸಿದನು. ಶೀಘ್ರದಲ್ಲೇ ದಶರಥನ ಮರಣವಾರ್ತೆ ಅವನ ಮೇಲೆ ಸಿಡಿಲಿನಂತೆ ಎರಗಿತು. ತಾನು ರಾಜ್ಯವೊಲ್ಲದೆ ಅಣ್ಣನನ್ನು ಒಲಿಸಲು ಭರತ ಕಾಡಿಗೇ ಬಂದನು. ಆತ ವರದಿ ಮಾಡಿದ ದುರ್ಘಟನೆ ಕೇಳಿ ರಾಮನಿಗೆ ಕಣ್ಣೀರು ಕೋಡಿಹರಿದವು. ರಾಜ್ಯಕ್ಕೆ ಆತನನ್ನು ಹಿಂದಿರುಗುವಂತೆ ಮಾಡಲು, ಭರತನಿರಲಿ, ಕೈಕೇಯೀ ಸ್ವತಃ ಪ್ರಾರ್ಥಿಸಿದರೂ, ಆಗಲಿಲ್ಲ.

ಚಿತ್ರಕೂಟದ ವಾಸ್ತವ್ಯದಲ್ಲಿ ಸೀತಾರಾಮರ ವನಕೇಳಿ ಜಲಕೇಳಿಗಳು ಅವರ ದಾಂಪತ್ಯ ಜೀವನದ ರಸಮಯ ಸಂದರ್ಭಗಳಾದುವು. ಕಾಗೆಯ ರೂಪದ ಜಯಂತನನ್ನು ರಾಮ ತೃಣಾಸ್ತ್ರದಿಂದ ನಿಗ್ರಹಿಸಿದ. ಮುಂದೆ ಮತ್ತೆ ಪ್ರಯಾಣ, ಋಷ್ಯಾಶ್ರಮಗಳಲ್ಲಿ ತಂಗಣೆ. ವಿರಾಧವಧೆಯ ಬಳಿಕ ರುದ್ರರಮಣೀಯವಾದ ದಂಡಕಾರಣ್ಯವನ್ನು ಸೀತಾರಾಮರೂ ಲಕ್ಷ್ಮಣನೂ ಬಂದು ಸೇರಿದರು. ಇಲ್ಲಿಯೇ ಅವರಿಗೆ ಜಟಾಯುವಿನ ಭೇಟಿಯಾದದ್ದು. ಮತ್ತೆ ಒಂದು ಯೋಜನದ ಪ್ರಯಾಣ. ಗೋದಾವರಿಗೆ ಹತ್ತಿರದ ಪಂಚವಟಿಯಲ್ಲಿ ಬೀಡಿಕೆಗೆ ನಿಶ್ಚಯಿಸಿದ್ದಾಯಿತು. ಇಲ್ಲಿಯೇ ಒಂದು ವರ್ಷ, ನಾಲ್ಕು ತಿಂಗಳು ಇದ್ದುದಾಯಿತು. ಮತ್ತೆ ರಾಮನಿಗೆ ತಮ್ಮಂದಿರ ಒಡನಾಟವಿಲ್ಲದ, ತಾಯಂದಿರ ಸೇವೆಯಿಲ್ಲದ ದುಃಖ ಒತ್ತರಿಸಿ ಬಂತು. ಆದರೆ ಜಾಬಾಲಿಮುನಿಯಿಂದ ಸುದ್ದಿ ತಿಳಿದು, ಸ್ವಲ್ಪ ನೆಮ್ಮದಿಯೆನಿಸಿತು.

ರಾಜರ್ಷಿಯಾದ ಶ್ರೀರಾಮ ವನವಾಸದಲ್ಲಿದ್ದಷ್ಟು ಕಾಲ ಬೇಟೆಯಾಡಲಿಲ್ಲ. ಹೀಗಿರಲು ಒಮ್ಮೆ ವನವಿಹಾರದ ವ್ಯಸನದಿಂದ ಆಯೆಡೆಗೆ ಬಂದ ಶೂರ್ಪಣಖಿ ರಾಮನಿಗೆ ಮನಸೋತಳು. ಆದರೆ ರಾಮನಾದರೋ, "ಏಕಪತ್ನೀ ವ್ರತ ಸುಭಾಷಿತ ಸೋಕಿಹುದು ನಮ್ಮವನು" ಎಂದು ಹೇಳಿ, ಆಕೆಯನ್ನು ನಿರಾಕರಿಸಿದ. ಇದರ ಪರಿಣಾಮ ಖರದೂಷಣಾದಿಗಳೊಂದಿಗೆ ಸಂಗ್ರಾಮ! ಶೂರ್ಪಣಖಿಯಿಂದ ರಾವಣನಿಗೆ ಸುದ್ದಿ ತಿಳಿದು, ಆತ ಮಾರೀಚನ ನೆರವು ಕೋರಿದ, "ಭೂಭಾರ ವಿಳಿಸಲು ನರನಾಗಿ ಅವತರಿಸಿದ ವಿಷ್ಣುವೇ ರಾಮ" ಎಂದು ಮಾರೀಚ ಎಷ್ಟೋ ತಿಳಿಯ ಹೇಳಿದ ರಾವಣನಿಗೆ. ಆತ ಒಪ್ಪಲಿಲ್ಲ. ಕಾಂಚನಮೃಗದ

ವ್ಯತಿಕರದಲ್ಲಿ ಸೀತಾಪಹರಣದ ದುರ್ಘಟನೆ ನಡೆದೇಹೋಯಿತು. ವಿಷ್ಣುಸ್ವರೂಪನೇ ಆದ ಶ್ರೀರಾಮನಿಗೆ ರಾವಣಮಾರೀಚರ ಸಂಚು ಮುಂಚಿತವಾಗಿಯೇ ಏಕೆ ತಿಳಿಯಲಿಲ್ಲವೋ ? ದುಷ್ಟನಿಗ್ರಹಕ್ಕೆ ಈ ನಿಮಿತ್ತ ಅವಶ್ಯವೆಂದು ಅವನಿಗೆ ತೋರಿರಬೇಕು.

ಪರ್ಣಕುಟಿಯಲ್ಲಿ ಸೀತೆ ಕಾಣದೆ ಹೋದಾಗ, "ರಾಮನಿಗೆ ಬುದ್ಧಿ ಪಲ್ಲಟವಾಯಿತು" ಎನ್ನುವ ಮಟ್ಟಿಗೆ ಆತ ಹಲುಬಿ ಹಂಬಲಿಸಿದ. ಲಕ್ಷ್ಮಣನು ಆತನ ದೈವೀ ಸ್ವರೂಪವನ್ನು ನೆನಪಿಸಿದರೂ ಆತನಿಗೆ ತಿಳಿವು ಮೂಡಲಿಲ್ಲ.

ಈಗ ಸೀತೆಗಾಗಿ ಹುಡುಕಾಟ. ಮರಣಾಸನ್ನವಾಗಿದ್ದ ಜಟಾಯುವಿನಿಂದ ನಡೆದ ಸಂಗತಿ ರಾಮಲಕ್ಷ್ಮಣರಿಗೆ ತಿಳಿಯಿತು. ಮುಂದೆ ಘಟಿಸಿದ ಕಬಂಧವಧೆ ರಾಕ್ಷಸನಿಗೆ ಮುಕ್ತಿಯನ್ನೂ ಆತನಿಂದ ರಾಮನಿಗೆ ಮುಂದಿನ ಕಾರ್ಯಾಚರಣೆಗೆ ಯುಕ್ತಿಯನ್ನೂ ತೋರಿಸಿತು. ಶಬರಿಯ ಆಶ್ರಮದಲ್ಲಿ 'ಆದಿಪುರುಷ' ಆಕೆಯ ಸೇವೆಯನ್ನು ಸ್ವೀಕರಿಸಿದ ಬಳಿಕ ಪ್ರಯಾಣ ಸಾಗಿತು.

ಋಷ್ಯಮೂಕಕ್ಕೆ ಬಂದು ತಲುಪಿದ ಮೇಲೆ ರಾಮನಿಗೆ ಸುಗ್ರೀವಸಖ್ಯ ಘಟಿಸಿತು. ಆತನನ್ನು ಆಂಜನೇಯನು 'ಸುದರ್ಶನಪಾಣಿ'ಯೆಂದೇ ಗುರುತಿಸಿದ. ಸುಗ್ರೀವನಾದರೂ ರಾಮನ ಅಲೌಕಿಕ ಪೌರುಷವನ್ನು ಪರೀಕ್ಷಿಸಿಯೇ ಆತನಿಗೆ ನೆರವಾಗುವ ಭರವಸೆಕೊಟ್ಟ. ಮುಂದೆ, ವಾಲಿ–ಸುಗ್ರೀವರ ವಿರಸಪ್ರಸಂಗ ಸಂಬಂಧದಲ್ಲಿ, ವಾಲಿ ತನ್ನನ್ನು ಸಂಹರಿಸಲು ಹೊರಟ ಶ್ರೀರಾಮನ ನಡೆವಳಿಕೆಯನ್ನು ಆಕ್ಷೇಪಿಸಲು, ಶ್ರೀರಾಮನು ಆತನಿಗೆ ಆತನ ತಪ್ಪನ್ನು ಅರಿವುಮಾಡಿಕೊಟ್ಟ. ಆಗ ಆತನಾದರೋ ತನ್ನ ಒಳಗಣ್ಣಿಂದ ರಾಮಲಕ್ಷ್ಮಣರನ್ನು ವಿಷ್ಣು ಶೇಷರೆಂದೇ ಅರಿತು, ಮುಕ್ತನಾದ. ಕೋಮಲಚಿತ್ತದ ರಾಮ ಬಾಲಕನಾದ ಅಂಗದನ ತಲೆದಡವಿ, ತಾರೆಯನ್ನು ಸಂತೈಸಿದ.

ಶರತ್ಕಾಲ ಕಳೆದು ಹೈಮಂತ ಕಾಲಿಟ್ಟಿತು, ಈಗ ರಾಮನಿಗೆ ಸುಗ್ರೀವನನ್ನು ಕಾರ್ಯೋನ್ಮುಖತೆಗೆ ಎಚ್ಚರಿಸಬೇಕಾಯಿತು. ಸೀತಾನ್ವೇಷಣೆ ಆಂಜನೇಯನ ಪ್ರಯತ್ನದಿಂದ ಯಶಸ್ವಿಯಾಯಿತು. ರಾಮನಿತ್ತ ಮಾಂಗಲ್ಯಮುದ್ರಿಕೆಯನ್ನು ಸೀತೆಗೆ ಒಪ್ಪಿಸಿ, ಆಕೆಯ ಚೂಡಾಮಣಿಯನ್ನು ರಾಮನಿಗೆ ತಂದು ಕೊಟ್ಟು ಆಂಜನೇಯನು ಕೃತಕೃತ್ಯನಾದ. ಆದರೆ ಸೀತೆಯ ಸ್ಥಿತಿಗೆ ರಾಮ ತಲೆಗ್ಗಿಸುವಂತಾಯಿತು.

ಮುಂದಿನ ಕಥೆ ಸೀತೆಯ ಬಂಧಮುಕ್ತಿಯನ್ನು ಕುರಿತದ್ದು. ಸುಗ್ರೀವನ ಸೈನ್ಯದೊಂದಿಗೆ ಆತನ ಪ್ರಯಾಣಸನ್ನಾಹ. ವಿಭೀಷಣ ಶರಣಾಗತಿ ಮತ್ತು ಸೇತುಬಂಧನಗಳಲ್ಲಿ ರಾಮನ ನ್ಯಾಯಪಾಲನೆ ಅಲೌಕಿಕ ಮಹಿಮೆಗಳು ಪ್ರಕಟಗೊಂಡವು. ವೈರಿದೂತರಾದ ಶುಕಸಾರಣನ್ನೂ ಆತ ನಯವಾಗಿ ನಡೆಸಿ ಕೊಂಡ. ಯುದ್ಧದ ನಾನಾ ಸನ್ನಿವೇಶಗಳಲ್ಲಿ ರಾಮನ ಅಲೌಕಿಕ ಶೌರ್ಯಸಾಹಸಗಳು ಹೊನಲಾಗಿ ಹೊಮ್ಮಿ ಹರಿದವು. ನಡುವೆ ಮಾಯಾಸೀತೆಯ ಹನನದಿಂದ ಉಂಟಾದ ಭ್ರಮೆಯೊಂದು ಗ್ರಹಣ ಹಿಡಿದಂತೆ ಅವನನ್ನು ಕೆಲ ಹೊತ್ತು ನಿಸ್ತೇಜಗೊಳಿಸಿತ್ತು. ಆದರೆ ಅದು ತೊಲಗಿ, ಮುಂದಿನ ರಣ ಕೋಲಾಹಲದಲ್ಲಿ ರಾವಣಪಡೆಯ ಮುಖ್ಯರೆಲ್ಲ ಹತರಾದರು. ಸೀತಾರಾಮರು ಲಕ್ಷ್ಮೀನಾರಾಯಣಸ್ವರೂಪರೆಂದು ಮಂಡೋದರಿಯೇ ಪತಿಗೆ ತಿಳಿಯ ಹೇಳಿದಳು. ರಾವಣನಿಗೂ ಅದು ಗೊತ್ತು! ಆದರೆ "ಮೂರೇ ಜನ್ಮಗಳಲ್ಲಿ ಮುಕ್ತಿಗೆ ಸಲ್ಲಲು ರಾಕ್ಷಸಜನ್ಮ ಪಡೆದ ಜಯವಿಜಯರಲ್ಲವೇ ತಾವು" ಎಂದು ಆಕೆಯನ್ನು ಸಮಾಧಾನ ಪಡಿಸಿದ ಆತ ಛಲವನ್ನು ಬಲವಾಗಿ ಹಿಡಿದು ಯುದ್ಧದ ಹಾದಿಯಲ್ಲೇ ನಡೆದ.

ಯುದ್ಧದ ಒಂದು ಘಟ್ಟದಲ್ಲಿ ರಾವಣನ ಶಕ್ತಿಪ್ರಹಾರಕ್ಕೆ ಲಕ್ಷ್ಮಣ ಅಚೇತನನಾದಾಗ ರಾಮ ಮಗುವಿನಂತೆ ಗೋಳಾಡಿದ. ಬಳಿಕ ಉಚಿತವಾದ ಉಪಚಾರದಿಂದ ಆತನ ಮನಸ್ಸು ತಿಳಿಯಾಯಿತು. ಮತ್ತೆ ಯುದ್ಧ ಸಾಗಿತು. ಈಗ ಸಕಲದೇವತಾಬಲಸನ್ನದ್ಧನಾಗಿ ರಾಮ ರಾವಣನನ್ನಿದಿರಿಸಿದ. ಅವನನ್ನು ಕೊಲ್ಲುವ ಮೊದಲು ವಿಭೀಷಣನ ಅನುಮತಿ ಬೇಡಿದ! ಕೊಂದ ಬಳಿಕ, ನಡೆದ ದುರ್ಘಟನೆಗೆ ದುಃಖಿಸಿದ ವಿಭೀಷಣನನ್ನೂ ಮಂಡೋದರಿಯನ್ನೂ ತಂದೆ ಮಕ್ಕಳನ್ನು ಸಂತೈಸುವಂತೆ ಸಂತೈಸಿದ. ಮಂಡೋದರಿ ಕೂಡ "ಸತಿಯ ನೆಪದಲಿ ದೇವ ನೀ ವಸುಮತಿಯ ಭಾರವ ಕಳೆದು ಶರಣಾಗತನ ಸಲಹಿದೆ" ಎಂದು ಹೇಳುವಂತಾಯಿತು!

ಇಷ್ಟಾಗಿ ಸೀತಾಪರಿಗ್ರಹಣ ಸಂದರ್ಭದಲ್ಲಿ ಶ್ರೀರಾಮ ಏಕೆ ತನ್ನ ಮನಸ್ಸು ಕಹಿಮಾಡಿಕೊಂಡನೋ ತಿಳಿಯದು. ಆತ ಆಕೆಯ ಮೇಲೆ ವೃಥಾರೋಪ ಹೊರಸಿದ. ಸೀತಾರಾಮರ ಅಮೇಯ ಮಹಿಮೆಯನ್ನು ಯಾರು ತನಗೆ ನಿವೇದಿಸಿದರೂ ಆತ ಕೇಳಲಿಲ್ಲ. ಸ್ವತಃ ಸೀತೆ ಪ್ರಾರ್ಥಿಸಿದರೂ ಆತ ಕೇಳಲಿಲ್ಲ. ಆಕೆ ಅಗ್ನಿ ಪ್ರವೇಶಮಾಡಿ ಮಹೋಜ್ವಲೆಯಾಗಿ ಹೊರಬಂದ ಮೇಲೆ, ಗುರುಹಿರಿಯರ ಸಮ್ಮತಿಯಂತೆ ಆಕೆಯನ್ನು ಪರಿಗ್ರಹಿಸಿದ. ಮುಂದೆ ಅಯೋಧ್ಯೆಗೆ ಸರ್ವರ ಪ್ರಯಾಣ, ಬಂಧುಸಮಾಗಮ.

ಶ್ರೀರಾಮಚಂದ್ರನು ಕುಮಾರ ವಾಲ್ಮೀಕಿಯ ದೃಷ್ಟಿಗೆ ಕುಮಾರವ್ಯಾಸನ ಕೃಷ್ಣನ ಹಾಗೆ ಮಾನವ ರೂಪವನ್ನು ಧರಿಸಿದ ಮಹಾವಿಷ್ಣುವೇ ಆಗಿದ್ದಾನೆ. ಆ ವಿಷ್ಣುವಿನ ಲೀಲಾವಿನೋದವನ್ನು ಚಿತ್ರಿಸುವುದೇ ಅವನ ಉದ್ದೇಶವೆಂದು ಹೇಳಬಹುದು.

---

ಗೀತಾರ್ಥ ಮಂಥನ

# ವಿಶ್ವರೂಪ ದರ್ಶನ ಯೋಗ

"ಸ್ಥಾಲ್ಯಾಂ ವೈಡೂರ್ಯಮಯ್ಯಾಂ ಪಚತಿ
ತಿಲಖಲಂ ಚಾಂದನೈರಿಂಧನೌಘೈಃ
ಸೌವರ್ಣೈರ್ಲಾಂಗಲಾಗ್ರೇ ವಿಲಖತಿ
ವಸುಧಾಮರ್ಕತೂಲಸ್ಯಹೇತೋಃ
ಛಿತ್ವಾ ಕರ್ಪೂರ ಖಂಡಾನ್ ವೃಥಮಿಹ
ಕುರುತೇಕೋದ್ರವಾಣಾಂಸಮಂತಾತ್
ಪ್ರಾಪ್ಯೇ ಮಾಂ ಕರ್ಮಭೂಮಿಂ ನಭಜತಿ
ಮನುಜಃ ಯಸ್ತಪೋ ಮಂದಭಾಗ್ಯಃ ॥

ಪುಣ್ಯಭೂಮಿಯಾದ ಭರತವರ್ಷದಲ್ಲಿ ಜನ್ಮತಳೆದ ಪ್ರತಿ ಮಾನವನೂ ಪುಣ್ಯಜೀವಿ. ಕರ್ಮಭೂಮಿಯಾದ ಈ ನೆಲದಲ್ಲಿ ಪ್ರತಿವ್ಯಕ್ತಿಗೂ ಮುಮುಕ್ಷುವಾಗುವ ಸದವಕಾಶವಿದೆ. ಆದರೆ ಈ ಸದವಕಾಶವನ್ನು ಉಪಯೋಗಿಸಿಕೊಳ್ಳದೆ, ಅಚಿರವಾದ ಐಹಿಕ ಭೋಗಲಾಲಸೆಯಲ್ಲಿ ಲೋಲುಪರಾಗಿ ನಿರರ್ಥಕ ಜೀವನ ನಡೆಸುವ ಜನರು ನಿಜಕ್ಕೂ ದೌರ್ಭಾಗ್ಯಶಾಲಿಗಳಲ್ಲವೇ !

ಅಧ್ಯಾತ್ಮ ವಿದ್ಯೆಯ ನೆಲೆವೀಡಾದ ಭರತವರ್ಷದಲ್ಲಿ ವೇದ, ಉಪನಿಷತ್ತುಗಳೂ, ರಾಮಾಯಣ, ಮಹಾಭಾರತ ಪುರಾಣಗಳೂ, ಕಾಮಧೇನು ಕಲ್ಪವೃಕ್ಷಗಳಂತೆ ಮೋಕ್ಷಕಾಂಕ್ಷಿಗಳ ಜಿಜ್ಞಾಸಾ ಪರಿಹಾರಕವಾಗಿವೆ: ಐಹಿಕಾಮುಷ್ಮಿಕ ವಿಷಯಗಳಲ್ಲಿ ತಲೆದೋರುವ ಧಾರ್ಮಿಕ ಸಂದೇಹಗಳ ನಿವೃತ್ತಿಗಾಗಿಯೇ 'ಭಗವದ್ಗೀತೆ'ಯು ಭಗವಾನ್ ಕೃಷ್ಣಪರಮಾತ್ಮನಿಂದ ಮಾನವಕುಲಕ್ಕೆ ಉಪದೇಶಿಸಲ್ಪಟ್ಟಿದೆ. ಈ ಗ್ರಂಥದ ಪ್ರತಿ ಅಧ್ಯಾಯವೂ ಹಂತ, ಹಂತವಾಗಿ ಮಾನವನನ್ನು ಅಧ್ಯಾತ್ಮಿಕ ಸಿದ್ಧಿಯತ್ತ ಕರೆದೊಯ್ಯುತ್ತದೆ. ಈ ಗೀತಾಜಾಹ್ನವಿಯ ಮಂಜುಲಕಲರವವನ್ನು ಕೇಳದ, ಈ ಸುರತಟಿನಿಯ ದಿವ್ಯಜಲವನ್ನು ಪಾನಮಾಡದ ವ್ಯಕ್ತಿಯ ಜನ್ಮ ನಿರರ್ಥಕ.

ಈ ಗ್ರಂಥದ ಹನ್ನೊಂದನೆಯ ಅಧ್ಯಾಯವು 'ವಿಶ್ವರೂಪದರ್ಶನ ಯೋಗ'ಎಂದು ಹೇಳಲ್ಪಟ್ಟಿದೆ. "ಅಂತರ್ಬಹಿಶ್ಚ ತತ್ ಸರ್ವಂ ವ್ಯಾಪ್ಯ ನಾರಾಯಣಸ್ಥಿತಃ"ಎಂಬ ವೇದವಾಕ್ಯದಂತೆ ಈ ಚರಾಚರ ವಿಶ್ವವೆಲ್ಲದರಲ್ಲೂ ಭಗವಂತನ ಅಭಿವ್ಯಕ್ತಿ ಇದೆ. ಅಲ್ಲದೆ "ಸರ್ವಂ ಖಲ್ವಿದಂ ಬ್ರಹ್ಮ"ಎಂಬ ಉಪನಿಷದ್ವಾಕ್ಯದಂತೆ ಚರಾಚರ ವಿಶ್ವದ ಅಣು ಅಣುವೂ ಪರಬ್ರಹ್ಮದ ಅಂಶದಿಂದ ಕೂಡಿದೆ. ವಿಶ್ವರೂಪ ದರ್ಶನಯೋಗವು ಮೇಲೆ ಹೇಳಿದ ಈ ಎರಡು ಉಕ್ತಿಗಳ ವಿವರಣೆಯೇ ಆಗಿದೆ.

ಡಿ. ಕೆ. ಸುಬ್ರಹ್ಮಣ್ಯಂ, ಎಂ. ಎ.,

"ಯದ್ಯದ್ವಿಭೂತಿ ಮತ್ಸತ್ವಂ
ಶ್ರೀ ಮದೂರ್ಜಿತಮೇವವಾ
ತತ್ತ ದೇವಾವಗಚ್ಛತ್ವಂ
ಮಮ ತೇಜೋಂಶ ಸಂಭವಮ್"

ಎಂದು ಹೇಳಿ ವಿಭೂತಿಯೋಗವನ್ನು ಉಪಸಂಹರಿಸಿದ ಶ್ರೀಕೃಷ್ಣಪರಮಾತ್ಮ, ಇದೇ ಶ್ಲೋಕವು



ತಿರುಮಲೆಯಲ್ಲಿನ ಗೀತೋಪದೇಶ ಪ್ರತಿಮೆ

ಮುಂದಿನ ಅಧ್ಯಾಯದ ಉಪೋದ್ಘಾತವಾಗುವಂತೆ ನಿರೂಪಿಸಿ ಭಕ್ತಶಿರೋಮಣಿಯಾದ ಅರ್ಜುನನ ಕುತೂಹಲವನ್ನು ಕೆರಳಿಸಿದ. ಪರಮ ಪುರುಷನಾದ ಶ್ರೀಕೃಷ್ಣನಿಗೆ ಸಖನಾದ ಅರ್ಜುನನು ಆತನ ಪರಮಾನುಗ್ರಹಕ್ಕೆ ಪಾತ್ರನಾಗುವ ಮಹದಾಕಾಂಕ್ಷೆಯಿಂದಲೂ, ಪರಮಾತ್ಮನ ದಿವ್ಯಮಂಗಲಕರವಾದ ವಿಶ್ವರೂಪವನ್ನು ಕಂಡು ಧನ್ಯತೆ ಪಡೆಯುವ ಉದ್ದಿಶ್ಯದಿಂದ ಕೂಡಿದವನಾಗಿ, ಹೀಗೆ ಹೇಳುತ್ತಾನೆ.

"ಮದನುಗ್ರಹಾಯ ಪರಮಂ
ಗುಹ್ಯಮಧ್ಯಾತ್ಮ ಸಂಜ್ಞಿತಂ
ಯತ್ವಯೋಕ್ತಂ ವಚಸ್ತೇನ
ಮೋಹೋಯಂ ವಿಗತೋ ಮಮ"
"ಭವಾಪ್ಯಯೌ ಹಿ ಭೂತಾನಾಂ
ಶ್ರುತೌ ವಿಸ್ತರಶೋ ಮಯಾ
ತ್ವತ್ತಃ ಕಮಲ ಪತ್ರಾಕ್ಷ
ಮಹಾತ್ಮ್ಯ ಮಪಿ ಚಾವ್ಯಯಂ"
"ಏವಮೇತದ್ಯಥಾತ್ಥ ತ್ವಂ
ಆತ್ಮಾನಂ ಪರಮೇಶ್ವರ
ದ್ರಷ್ಟುಮಿಚ್ಛಾಮಿ ತೇ ರೂಪಂ
ಐಶ್ವರ್ಯಂಪುರುಷೋತ್ತಮ"

ಪರಮಾತ್ಮನೇ ನಿನ್ನ ವಿವಿಧವಾದ ವಿಭೂತಿಗಳ ವಿಸ್ತಾರವನ್ನು ಕೇಳಿ ನನ್ನ ಮೋಹಪಾಶವು ನಿವೃತ್ತಿಯಾಯ್ತು. ಇನ್ನು ನೀನು ವಿಶ್ವದ ಸಮಸ್ತ ವಸ್ತುಗಳನ್ನು ಅವರಿಸಿರುವ ರೂಪವನ್ನು ಕಾಣಲಿಚ್ಛಿಸುವೆ, ಪುರುಷೋತ್ತಮನೇ. ಅದನ್ನು (ವಿಶ್ವರೂಪವನ್ನು) ತೋರಿಸು.

ಅರ್ಜುನನ ಮಾತನ್ನು ಕೇಳಿದ ಕಮಲ ಪತ್ರಾಕ್ಷನಾದ ವಾಸುದೇವನು ಹೇಳುತ್ತಾನೆ.

"ನತು ಮಾಂ ಶಕ್ಯಸೇ ದ್ರಷ್ಟುಂ
ಅನೇನೈವ ಸ್ವಚಕ್ಷುಷಾ
ದಿವ್ಯಂ ದದಾಮಿ ತೇ ಚಕ್ಷುಃ
ಪಶ್ಯ ಮೇ ಯೋಗಮೈಶ್ವರಮ್"

'ಅರ್ಜುನಾ, ಈ ನಿನ್ನ ಚರ್ಮಚಕ್ಷುಗಳಿಂದ ನೀನು ನನ್ನನ್ನು ನೋಡಲಾರೆ ಅದಕ್ಕೆ ದಿವ್ಯ ಚಕ್ಷುಗಳೇ ಬೇಕು, ಎಂದು. ಶ್ರೀಕೃಷ್ಣನ ಮಾತುಗಳ ಶಬ್ದಾರ್ಥ ಇದಾಗುತ್ತದೆ. ಇನ್ನು ಆಧ್ಯಾತ್ಮಿಕ ದೃಷ್ಟಿಕೋನದಿಂದ ಈ ಶ್ಲೋಕಾರ್ಥವನ್ನು ಹೀಗೆ ವಿವರಿಸಬಹುದು.

"ಹಿರಣ್ಮಯೇನ ಪಾತ್ರೇಣ
ಸತ್ಯಸ್ಯಾಪಿಹಿತಂ ಮುಖಂ
ತತ್ತ್ವಂ ಪೂಷನ್ ಅಪಾವೃಣು
ಸತ್ಯ ಧರ್ಮಾಯ ದೃಷ್ಟಯೇ"
(ಈಶಾವಾಸ್ಯೋಪನಿಷತ್)

ಎಂಬ ಉಪನಿಷದ್ವಾಣಿಯ ಅನುಸಾರವಾಗಿ; ಸಾಧಾರಣತಯಾ ಮನುಷ್ಯ ಶಾಶ್ವತ ಸತ್ಯದ

ಅನ್ವೇಷಣೆಯನ್ನು ತಾನಾಗಿಯೇ ಮಾಡಲಾರ. ಅವನ ದರ್ಶನಕ್ಕೆ ಭಗವಂತನ ಅನುಗ್ರಹಬೇಕು. ಅಲ್ಲದೆ, ಬ್ರಹ್ಮಜ್ಞಾನಿಯಾಗಬಯಸುವ ಪ್ರತಿ ವ್ಯಕ್ತಿಗೂ "ಆತ್ಮವತ್ ಸರ್ವಭೂತಾನಿ ಯಃ ಪಶ್ಯತಿ ಸ ಪಂಡಿತಃ" ಎಂಬ ಸೂಕ್ತಿಯಂತೆ ವಿಶ್ವದ ಎಲ್ಲ ವಸ್ತುಗಳಲ್ಲೂ ಬ್ರಹ್ಮಸ್ವರೂಪವನ್ನು ಕಾಣುವ ವಿಶಾಲ ಹೃದಯ ಬೇಕು. ಅರ್ಜುನನು ಭಗವಂತನ ಅನುಗ್ರಹಕ್ಕೆ ಪಾತ್ರನಾದ ವ್ಯಕ್ತಿ. ಆದರಿಂದಲೇ ಆತನನ್ನು ಆವರಿಸಿದ್ದ ಮೋಹಾಂಧಕಾರವು ಶ್ರೀಕೃಷ್ಣನಿಂದ ಪರಿಹರಿಸಲ್ಪಟ್ಟು, ಭಗವಂತನ ವಿಶ್ವರೂಪವನ್ನು ದರ್ಶಿಸುವ ಅವಕಾಶ ದೊರೆಯಿತು.

ಕೋಟಿ ಸೂರ್ಯಸಮಪ್ರಭೆಯಿಂದ ಝಗಝಗಿಸುವ ವಿಶ್ವರೂಪವನ್ನು ಕಂಡ ಅರ್ಜುನ ಮಾತುಗಳಿಗೆ ನಿಲುಕದ ಅನುಭವಾತೀತ ಸ್ಥಿತಿಯನ್ನು ತಲುಪಿದ. ತನಗುಂಟಾದ ಅಲೌಕಿಕ ಅನುಭವವನ್ನು ಹೀಗೆ ಹೇಳುತ್ತಾನೆ.

"ಪಶ್ಯಾಮಿ ದೇವಾಂ ಸ್ತವ ದೇವ ದೇಹೇ
ಸರ್ವಾಂ ಸ್ತಥಾ ಭೂತ ವಿಶೇಷ ಸಂಘಾನ್
ಬ್ರಹ್ಮಾಣಮೀಶಂ ಕಮಲಾಸನಸ್ಥಂ
ಋಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್"
"ಅನೇಕ ಬಾಹೂದರ ವಕ್ತ್ರ ನೇತ್ರಂ
ಪಶ್ಯಾಮಿ ತ್ವಾಂ ಸರ್ವತೋನಂತ ರೂಪಂ
ನಾನ್ತಂ ನಮಧ್ಯಂ ನಪುನಸ್ತವಾದಿಂ
ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ"

'ಸ್ವಾಮಿಯೇ' ನಿನ್ನ ವಿಶ್ವರೂಪ ಅದ್ಭುತವಾದ ಮಾಯಾಲೋಕ. ಇದರಲ್ಲಿ ನೀನು ಅನೇಕ ದೇವ ದಾನವರನ್ನೂ ಸಮಸ್ತ ಭೂತಗಳನ್ನೂ ಋಷಿಗಣವನ್ನೂ ಯಕ್ಷ ಸಮೂಹವನ್ನೂ ತ್ರಿಮೂರ್ತಿಗಳನ್ನೂ ಒಳಗೊಂಡಿರುವೆ. ಅನೇಕ ಬಾಹುಗಳುಳ್ಳವನಾಗಿ, ಅನೇಕ ಹೊಟ್ಟೆಗಳುಳ್ಳವನಾಗಿ, ಮುಖಗಳುಳ್ಳವನಾಗಿ, ಎಲ್ಲಕಡೆಗೂ ವ್ಯಾಪಿಸಿ ಕಾಣುತ್ತಿರುವ ನಿನ್ನ, ಆದಿ, ಮಧ್ಯಾಂತಗಳನ್ನು, ನಾನು ಅರಿಯದವನಾಗಿದ್ದೇನೆ.

ಅರ್ಜುನನ ಈ ಮಾತಗಳಲ್ಲಿನ ಆಧ್ಯಾತ್ಮಿಕ ಭಾವವನ್ನು ಹೀಗೆ ವಿವರಿಸಬಹುದು. "ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ಸಭೂಮಿಂ ವಿಶ್ವತೋ ವೃತ್ವಾ ಅತ್ಯತಿಷ್ಠದ್ದಶಾಂಗುಲಮ್" ಎಂಬ ಪುರುಷಸೂಕ್ತವಾಕ್ಯದಂತೆ ಈ ವಿಶ್ವವು ವಿರಾಟ್‌ಪುರುಷನ ಅಭಿವ್ಯಕ್ತಿಯೇ ಆಗಿದೆ. ಅಣುವಿನಲ್ಲಿ ಅಣುವಾಗಿ ಮಹತ್ತಿನಲ್ಲಿ ಮಹತ್ತಾಗಿ ವಿಶ್ವವನ್ನು ವ್ಯಾಪಿಸಿರುವ ಆತನೇ ಮಹಾವಿಷ್ಣು ಅಥವಾ ಪರಬ್ರಹ್ಮ. ಈ ಪರಬ್ರಹ್ಮದ ರೂಪವನ್ನು ನಾರಾಯಣ ಸೂಕ್ತವು ಹೀಗೆ ವರ್ಣಿಸುತ್ತದೆ.

"ನೀಲತೋಯದ ಮಧ್ಯಸ್ಥಾತ್
ವಿದ್ಯುಲ್ಲೇಖೇವ ಭಾಸ್ವರಾ
ನೀವಾರ ಶೂಕವತ್ತನ್ವೀ
ಪೀತಾ ಭಾಸ್ವತ್ಯಣೂಪಮ್ಯಾತಸ್ಥಾಃ
ಶಿಖಾಯಾ ಮಧ್ಯೇ ಪರಮಾತ್ಮಾವ್ಯವಸ್ಥಿತಃ
ಸಬ್ರಹ್ಮಸಶಿವಸ್ಸಹರಿಃ
ಸ್ಸೇಂದ್ರಃ ಸೋಕ್ಷರಃ ಪರಮಸ್ಸ್ವರಾಟ್॥

ಇಂದ್ರನೀಲ ಮಣಿಯಂತೆ ನೀಲಪ್ರಕಾಶದಿಂದ ಕಂಗೊಳಿಸುವ ಮೇಘಮಾಲೆಯ ನಡುವೆ ಹೊಳೆಯುವ ಬಳ್ಳಿಮಿಂಚಿನಂತೆ ಕಣ್ಣು ಕೋರೈಸುವ ಕಾಂತಿಯಿಂದ ಥಳಥಳಿಸುತ್ತದೆ. ಆ "ಬ್ರಹ್ಮ ವಸ್ತು". ಅನುಪಮವಾದ ಅದು ಸೂಕ್ಷ್ಮಾತ್ ಸೂಕ್ಷ್ಮತರವಾಗಿ ನೀವಾರಶೂಕದ ತುದಿಯಲ್ಲಿ ನೆಲೆಸಿದೆ. ಇದೇ ಹರಿ, ಬ್ರಹ್ಮ, ಇಂದ್ರ ಮೊದಲಾಗಿ ಕರೆಯಲ್ಪಡುತ್ತದೆ ಮತ್ತು ಅವಿನಾಶಿಯಾಗಿದೆ.

ಯೋಗಿಗಳ ಸಾಧನೆಯ ಚರಮಗಂತವ್ಯವೇ ಈ ಪರಬ್ರಹ್ಮದ ಆವಿಷ್ಕಾರ. ಹೆಚ್ಚೇನು "ವೇದಾಹಮೇತಂ ಪುರುಷಂ ಮಹಾನ್ತಂ ಆದಿತ್ಯ ವರ್ಣಂ ತಮಸಃ ಪರಸ್ತಾತ್" ಎಂಬುದಾಗಿ ಋಷಿವಾಣಿಯೇ ನಿರೂಪಿಸುತ್ತದೆ. ಇಂತಹ ಪರಬ್ರಹ್ಮನನ್ನೇ ಸಖನನ್ನಾಗಿ ಪಡೆದ ಅರ್ಜುನ ಅದೆಷ್ಟು ಧನ್ಯನೋ! ಭಯ, ವಿಸ್ಮಯ, ಆಶ್ಚರ್ಯ ಮೊದಲಾದ ವಿವಿಧ ಭಾವಗಳ ಸುಳಿಯಲ್ಲಿ ಸಿಲುಕಿದ ಅರ್ಜುನ ಗದ್ಗದ ಕಂಠದಿಂದ ಹೀಗೆ ಪ್ರಾರ್ಥಿಸುತ್ತಾನೆ.

"ತ್ವಮಕ್ಷರಂ ಪರಮಂ ವೇದಿತವ್ಯಂ
ತ್ವಮಸ್ಯ ವಿಶ್ವಸ್ಯ ಪರಂ ನಿಧಾನಂ
ತ್ವಮವ್ಯಯಃ ಶಾಶ್ವತಧರ್ಮ ಗೋಪ್ತಾ
ಸನಾತನಸ್ತ್ವಂ ಪುರುಷೋ ಮತೋ ಮೇ ॥

ಭಗವಂತನೇ! ನೀನು ಅವಿನಾಶಿ. ಶ್ರುತಿಯಲ್ಲಿ ಹೊಗಳಲ್ಪಡುವ ಪ್ರಣವಸ್ವರೂಪಿ. ಶಾಶ್ವತವಾದ ವೈದಿಕ ಧರ್ಮದ ಗೋಪ್ತಾರನಾಗಿದ್ದೀ ಮತ್ತು ಈ ವಿಶ್ವದ ರಕ್ಷಣೆ ಮಾಡುವ ಪರಾತ್ಪರ ವಸ್ತುವೇ ನೀನು.

ಸಾಮಾನ್ಯವಾಗಿ ಮನುಷ್ಯರು ಯಜ್ಞಯಾಗಾದಿಗಳನ್ನಾಗಲಿ ವ್ರತ ನೇಮಗಳನ್ನಾಗಲಿ ಮಾಡುವುದು 'ನಾನು ಮಾಡುತ್ತಿದ್ದೇನೆ' ಎಂಬ ಭಾವದಿಂದ. ಅರ್ಜುನನೂ ಸಹ ಈ ಭಾವದಿಂದ ಹೊರತಲ್ಲ. ಕುರುಕ್ಷೇತ್ರ ಯುದ್ಧದಲ್ಲಿ ತಾನೇ ವೀರರನ್ನು ಕೊಲ್ಲುತ್ತೇನೆ ಎಂಬ ಭಾವ ಆತನಿಗಿದೆ. ಇದನ್ನರಿತ ಶ್ರೀಕೃಷ್ಣ ಅವನ ಅಹಂ ಭಾವವನ್ನು ನಾಶಮಾಡುವ ಇಚ್ಛೆಯಿಂದ ಅವನಿಗೆ ತನ್ನ ವಿಶ್ವರೂಪದಲ್ಲಿ ಕೌರವವೀರರ ನಾಶವನ್ನೂ ಪ್ರಮುಖ ಆಚಾರ್ಯರಾದ ಭೀಷ್ಮ ದ್ರೋಣ ಮುಂತಾದವರ ಅವಸಾನವನ್ನೂ ತೋರಿಸುತ್ತಾನೆ. ಅದನ್ನು ಕಂಡ ಅರ್ಜುನ ಹೀಗೆನ್ನುತ್ತಾನೆ.

"ಅಮೀಚ ತ್ವಾಂ ಧೃತರಾಷ್ಟ್ರಸ್ಯಪುತ್ರಾಃ
ಸ್ಸರ್ವೇಸ್ಸಹೈ ವಾವನಿಪಾಲ ಸಂಘೈಃ
ಭೀಷ್ಮೋ ದ್ರೋಣಃ ಸೂತಪುತ್ರಸ್ತಥಾಸೌ
ಸಹಾಸ್ಮದೀಯೈರಪಿ ಯೋಧಮುಖ್ಯೈಃ
ವಕ್ತ್ರಾಣಿ ತೇ ತ್ವರಮಾಣಾ ವಿಶಂತಿ
ದಂಷ್ಟ್ರಾಕರಾಳಾನಿ ಭಯಾನಕಾನಿ
ಕೇಚಿದ್ವಿಲಗ್ನಾ ದಶನಾಂತರೇಷು
ಸಂದೃಶ್ಯಂತೇ ಚೂರ್ಣಿತೈರುತ್ತಮಾಂಗೈಃ"

ಇಂತಹ ಭಯಾನಕ ದೃಶ್ಯವನ್ನು ಕಂಡ ಕೂಡಲೇ ಅರ್ಜುನ ಮರವಟ್ಟುಹೋಗುತ್ತಾನೆ. ಅವನ ಅಹಂಭಾವ ಕಂಗಿ ನೀರಾಗಿ ದೈನ್ಯತೆ ಅವನನ್ನು ಆವರಿಸುತ್ತದೆ. ಜೊತೆಯಲ್ಲೇ ಇಂತಹ ಘೋರರೂಪವನ್ನು ಧರಿಸಬಲ್ಲವ್ಯಕ್ತಿಯಾರು ? ಎಂಬುದನ್ನು ತಿಳಿಯುವ ಕುತೂಹಲ ಉಂಟಾಗುತ್ತದೆ. ಆ ಕೂಡಲೇ ಶ್ರೀಕೃಷ್ಣನನ್ನು ಕುರಿತು'ನೀನು ಯಾರು? ಏಕೆ ಇಂತಹ ಘೋರರೂಪವನ್ನು ಧರಿಸಿರುವೆ ಹೇಳು'ಎಂದು ಕೇಳಲಾಗಿ ಕೃಷ್ಣನು ಹೇಳುತ್ತಾನೆ:

"ಕಾಲೋಸ್ಮಿ ಲೋಕ ಕ್ಷಯಕೃತ್ ಪ್ರವೃದ್ಧೋ
ಲೋಕಾನ್ ಸಮಾಹರ್ತುಮಿಹ ಪ್ರವೃತ್ತಃ
ಋತೇ ಪಿತ್ವಾಂ ನ ಭವಿಷ್ಯಂತಿ ಸರ್ವೇ
ಯೇಽವಸ್ಥಿತಾ ಪ್ರತ್ಯನೀಕೇಷು ಯೋಧಾಃ॥

'ಅರ್ಜುನಾ ಈ ವೇದಗಳಲ್ಲಿ "ಕಾಲಾಯನಮಃ ಕಲವಿಕರಣಾಯನಮೋ" ಎಂದು ಹೇಳುವ ಕಾಲನೇ ನಾನು. ದುಷ್ಟ ಶಿಕ್ಷಣೆ ಶಿಷ್ಟಪರಿಪಾಲನೆಯು ನನ್ನಗುರಿ. ನೀನು ನೆಪಮಾತ್ರಕ್ಕೆ ನಿಂತರೂ ದುಷ್ಟರಾದ ಕೌರವರ ನಾಶವಾಗುತ್ತದೆ.

ಕೃಷ್ಣನ ಮಾತುಗಳನ್ನು ಕೇಳಿದ ಅರ್ಜುನನಿಗೆ ದಿವ್ಯಜ್ಞಾನವು ಉದಿಸಿತು. ಕೂಡಲೇ ಆತನಿಗೆ ಸಾಷ್ಟಾಂಗವೆರಗಿ ಪ್ರಾರ್ಥಿಸುತ್ತಾನೆ.

"ತ್ವಮಾದಿದೇವಃ ಪುರುಷಃ ಪುರಾಣಃ
ತ್ವಮಸ್ಯ ವಿಶ್ವಸ್ಯಪರಂ ನಿಧಾನಂ
ವೇತ್ತಾಸಿ ವೇದ್ಯಂ ಚ ಪರಂಚ ಧಾಮ
ತ್ವಯಾತತಂ ವಿಶ್ವಮನಂತರೂಪ"

ಅಧ್ಯಾಯದ ಕೊನೆಯಲ್ಲಿ ಕೃಷ್ಣನು ಹೇಳುತ್ತಾನೆ 'ಅರ್ಜುನಾ, ವೇದಾಧ್ಯಯನ ತಪಸ್ಸು ಮುಂತಾದುವುಗಳಿಂದ ನನ್ನನ್ನು ಭಜಿಸುವುದು ಆದರಿಂದ ನಾನು ದೊರೆಯುವುದು ನಿಶ್ಚಯ. ಆದರೆ ಅವರು ಎಲ್ಲರನ್ನೂ ಸರ್ವಸಮರ್ಪಣ ಭಾವದಿಂದ ನನಗೆ ಸಮರ್ಪಿಸಬೇಕು. ಎಂದರೆ "ನಾಯ ಮಾತ್ಮಾ ಪ್ರವಚನೇನಲಭ್ಯೋನಮೇಧಯಾನಬಹುನಾಶ್ರುತೇನ" ಎಂಬ ಶ್ರುತಿವಾಕ್ಯಾನುಗುಣವಾಗಿ ಭಕ್ತಿ ಪೂರ್ಣಕವಾದ ನಂಬಿಕೆಯಿಂದ ನನ್ನನ್ನು ಸ್ತುತಿಸುವವರಿಗೆ ಮಾತ್ರ ಪರಮ ಪದವಿಯು ಲಭ್ಯ" ಎಂದು ಹೇಳಿ ವಿಶ್ವರೂಪದರ್ಶನ ಯೋಗವನ್ನು ಉಪಸಂಹರಿಸುತ್ತಾನೆ.



# ಮಂಕುತಿಮ್ಮನ ಕಗ್ಗ

ವಿದ್ವಾನ್ ಬ. ನ. ಗುಂಡೂರಾವ್

ಕನ್ನಡ ಸಾಹಿತ್ಯದ ಆಚಾರ್ಯ ಪರಂಪರೆಯಲ್ಲಿ ಅಗ್ರಮಾನ್ಯರಾದ ಕೀ॥ಶೇ॥ ಡಿ.ವಿ ಗುಂಡಪ್ಪನವರು ರಾಷ್ಟ್ರೀಯ ಹಾಗೂ ಅಂತರ ರಾಷ್ಟ್ರೀಯ ಖ್ಯಾತಿ ಪಡೆದಿದ್ದ ಉದ್ದಾಮ ಪಂಡಿತರು. ಉತ್ತಮೋತ್ತಮವಾದ ಹತ್ತಾರು ಗ್ರಂಥಗಳ ಲೇಖಕರಾದ ಇವರು ಜಗಜ್ಜೀವನದ ನಾನಾಮುಖಗಳನ್ನು ಆಳವಾಗಿ ಅಧ್ಯಯನ ಮಾಡಿದ್ದ ದಾರ್ಶನಿಕರೂ ಆಗಿದ್ದರು. ಭಾರತೀಯ ಹಾಗೂ ಪಾಶ್ಚಿಮಾತ್ಯ ದಾರ್ಶನಿಕ ವಿಚಾರಧಾರೆಯನ್ನು ತೌಲನಿಕವಾಗಿ ಅಧ್ಯಯನ ಮಾಡಿದ್ದ ಶ್ರೀಯುತರು– "ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ" ಎಂಬ ಉಪನಿಷದ್ವಾಕ್ಯವನ್ನು ತಮ್ಮ ಜೀವನದ ಧ್ಯೇಯವಾಗಿಟ್ಟುಕೊಂಡು–ಕರ್ಮಯೋಗಿಯಾಗಿ, ಬಹುದೊಡ್ಡ ಸಮನ್ವಯವಾದಿಯಾಗಿ, ಪೂಜ್ಯರಾದ ಹಿರಿಯ ಚೇತನವಾಗಿದ್ದವರು. ತಮ್ಮ ಅಪಾರವಾದ ಲೋಕಾನುಭವ ಹಾಗೂ ಗಂಭೀರ ಚಿಂತನದ ಫಲವಾಗಿ, ಡಿ ವಿ.ಜಿ ಯವರು, ಕನ್ನಡಕ್ಕೆ ಕೊಟ್ಟು ಹೋಗಿರುವ ಗ್ರಂಥಗಳಲ್ಲಿ, ಶಾಶ್ವತ ಮೌಲ್ಯವನ್ನು ಪಡೆಯುವ ಗ್ರಂಥಗಳು ಯಾವುವೆಂದು ಸುಲಭವಾಗಿ ಯಾರೂ ನಿರ್ಣಯ ಮಾಡಲು ಸಾಧ್ಯವಾಗದಂತಹ ಗಂಭೀರ ವಿಚಾರಧಾರೆ ಅವರ ಸಾಹಿತ್ಯದ ವೈಶಿಷ್ಟ್ಯ ನಮ್ಮ ರಾಷ್ಟ್ರದ ಸಮಗ್ರ ಇತಿಹಾಸವನ್ನು ಪ್ರತ್ಯಕ್ಷ ಕಂಡ ಲೋಕೋತ್ತರ ಪ್ರಹರಿಯಾದ, ಉತ್ತರದ ರಜತಾದ್ರಿಯಲ್ಲಿ ಎರಡು ಶಿಖರಗಳಿವೆ, ಒಂದು ಗೌರಿ ಶಂಕರ, ಒಂದು ಧವಳಗಿರಿ ಅದೇ ರೀತಿಯಲ್ಲಿ ಶ್ರೀ ಡಿ.ವಿ ಜಿ. ಯವರ ಸಾಹಿತ್ಯದಲ್ಲಿ ಎರಡು ಲೋಕೋತ್ತರ ಗ್ರಂಥಗಳಿವೆ-ಒಂದು "ಜೀವನ ಧರ್ಮಯೋಗ" ಇನ್ನೊಂದು "ಮಂಕುತಿಮ್ಮನ ಕಗ್ಗ". ಒಂದು ಶ್ರೀ ಕೃಷ್ಣ ಕಂಠೋಕ್ತ ಮುಕ್ತಧಾರಾ ವಿಲಸನ್ಮಹಾಗೀತೆಯಾದ–ಭಗವದ್ಗೀತೆ–ಯಬಗ್ಗೆ ಬೆಳಕು ಚೆಲ್ಲುತ್ತದೆ. ಇನ್ನೊಂದು ಸಮಗ್ರಜೀವನದ ಬಗ್ಗೆ ಬೆಳಕು ಚೆಲ್ಲುತ್ತದೆ. ಅವರು ತಮ್ಮನ್ನು ತಾವು "ಕೋಪಿ ಬ್ರಹ್ಮ ಪಟ್ಟಣ ಭಿಕ್ಷುಕಃ" ಎನ್ನುತ್ತಿದ್ದರು. ಈ ಹಿನ್ನೆಲೆಯಲ್ಲಿ ನೋಡಿದಾಗ ತಮ್ಮ ಗ್ರಂಥಕ್ಕೆ–ಮಂಕುತಿಮ್ಮನ ಕಗ್ಗ"ಎಂಬ ಶೀರ್ಷಿಕೆ ಕೊಟ್ಟಿರುವುದರಲ್ಲಿ, ವಿನೋದಕ್ಕಿಂತಲೂ ವಿನಯವೇ ಹೆಚ್ಚಾಗಿ ಕಾಣುತ್ತದೆ. ವೈದುಷ್ಯ ವೆಂಬ ಭವನಕ್ಕೆ ವಿನಯದ ಗೋಪುರವಿದ್ದಾಗ ಅದರ ಭವ್ಯತೆ ಇಮ್ಮಡಿಯಾಗುತ್ತದೆ–ಸೊಗಸು ಹೆಚ್ಚುತ್ತದೆ. ಆಗ ಅದು – ದರ್ಶನೀಯವಸ್ತು, – ಸಂದರ್ಶನೀಯ ವಸ್ತು, ಸಮಾದರಣೀಯ ವಸ್ತು – ಎಂದು ಕೀರ್ತಿತ ವಾಗುತ್ತದೆ.

"ಮಂಕುತಿಮ್ಮನ ಕಗ್ಗ"–ಈ ಹೆಸರು ನೋಡಿದಾಗ ಯಾರಾದರೂ ನಗುತ್ತಾರೆ, ಉದಾಸೀನ ಮಾಡುತ್ತಾರೆ, ತಾತ್ಸಾರವಾಗಿ ಕಾಣುತ್ತಾರೆ. ಆದರೆ ಗ್ರಂಥವನ್ನು ಕೂಲಂಕಷವಾಗಿ ಅಧ್ಯಯನ ಮಾಡಿದಾಗ ವಿಷಯ ನಿರೂಪಣಾ ವೈಖರಿಗೂ, ವಿಚಾರ ವೈವಿಧ್ಯಕ್ಕೂ ಯಾರಾದರೂ ಬೆರಗಾಗುತ್ತಾರೆ ಗ್ರಂಥದಲ್ಲಿ ಆದ್ಯಂತವಾಗಿ ಗುಪ್ತಗಾಮಿನಿಯಾಗಿ ಪ್ರವಹಿಸಿರುವ ಸ್ವಾನುಭವವನ್ನು ಕಂಡು ಯಾರಾದರೂ ಗೌರವದಿಂದ ಕೈಮುಗಿಯಬೇಕು ಪ್ರಪ್ರಥಮವಾಗಿ ಈ ಗ್ರಂಥವನ್ನು ಓದಿದ ಒಬ್ಬ ಹಿರಿಯರು ಹೇಳಿದರಂತೆ–



"ಹಸ್ತಕ್ಕೆ ಬರೆ ನಕ್ಕೆ, ಓದುತ್ತ ಓದುತ್ತ
ಮಸ್ತಕಕಿಟ್ಟು, ಗಂಭೀರನಾದೆ, ತುತ್ತತುದಿ
ಯೊಳುನಿನ್ನ
ವಿಸ್ತರದ ದರ್ಶನದ ಪುಸ್ತಕಕೆ
ಕೈಮುಗಿದೆ ಮಂಕುತಿಮ್ಮ ॥

ಜೀವನದಲ್ಲಿ ಬರುವ ಯಾವುದೇ ಸಂದಿಗ್ಧಕ್ಕಾದರೂ ಈ ಗ್ರಂಥದಲ್ಲಿ ಪರಿಹಾರವಿದೆ, ವಿವರಣೆ ಇದೆ. 945 ಪದ್ಯಗಳಿರುವ ಈ "ಕಗ್ಗ" ದಲ್ಲಿ ಶ್ರೀ ಡಿ. ವಿಜಿಯವರು ವಿಮರ್ಶಿಸದೆ ಬಿಟ್ಟಿರುವ ಅಂಶವೇ ಇಲ್ಲ. ಇಲ್ಲಿರುವುದೇ ಎಲ್ಲೆಲ್ಲೂ ಇದೆ. ಇಲ್ಲಿಲ್ಲದ್ದು ಮತ್ತೆಲ್ಲಿಯೂ ಇರಲಾರದು. ಬಹುಶಃ ಇದ್ದರೂ ಸಹ ಅದು ಈ ಗ್ರಂಥದಲ್ಲಿ ಬಂದಿರುವ ಯಾವುದೋ ಒಂದು ವಿಷಯದಲ್ಲೇ ಅನ್ತರ್ಗತವಾಗಿರಲೇಬೇಕು.

ಶತ ಶತಾಬ್ದಿಗಳಿಂದ ಜಗತ್ತು ಯಾವುದನ್ನು ಕಾಣದೇ ಇದ್ದರೂ–ಬಲವಾಗಿ ನಂಬಿದೆಯೋ ಆ ತತ್ತ್ವ ಯಾವುದು?ಇದೊಂದು ಮೂಲಭೂತವಾದ ಪ್ರಶ್ನೆ ಆ ತತ್ತ್ವವನ್ನು ಯಾವ ಯಾವ ಹೆಸರಿನಿಂದ ಬೇಕಾದರೂ ಕರೆಯಬಹುದು ಒಂದ ಖಚಿತವಾದ ನಿರ್ದಿಷ್ಟವಾದ ಪರಿಭಾಷೆಗಳೂ ಸಹ ನಾಕನ್ನು ಗೊಂದಲವೇಳುವ ಸಂದರ್ಭಗಳೂ ಸಹ ಇಲ್ಲದೇ ಇಲ್ಲ ಜಗತ್ತಿನ ಇತಿಹಾಸ ಇದಕ್ಕೆ ಸಾಕ್ಷಿಯಾಗಿದೆ. ಈ ವ್ಯರ್ಥಚರ್ಚೆಗವಕಾಶವಾಗದಿರಲೆಂಬ ಉದ್ದೇಶದಿಂದ ಶ್ರೀ ಡಿವಿಜಿಯವರು "ಆ ವಿಚಿತ್ರಕ್ಕೆ ನಮಿಸು"–ಎಂದರು. ಈ ಜಗತ್ತಿನ ಅಸ್ತಿತ್ವ ಕೈತಸ್ಯ ಒಂದು ವಿಚಿತ್ರವೇ ಸರಿ. ಈ ವಿಚಿತ್ರವೆಂಬ ಮಾತು ಎಲ್ಲರೂ ಒಪ್ಪುತ್ತಾರೆ ಯಾರೊಬ್ಬರೂ ಅಸಮಾಧಾನ ಪಡಬೇಕಾಗಿಲ್ಲ.'ವಿಚಿತ್ರಕೆ ನಮಿಸು' 'ವಿಶೇಷಕೆಮಣಿ' 'ಗಹನ ತತ್ವಕೆ ಶರಣು'– ಎಂಬ ಮೂರು ವಾಕ್ಯಗಳು ಕಾವ್ಯದ ಪ್ರಾರಂಭದಲ್ಲೇ ಬರುತ್ತವೆ. ಅರ್ಥಗಾಂಭೀರ್ಯದಿಂದ ತುಂಬಿರುವ ಈ ಶಬ್ದ ಪುಂಜಗಳು ತುಂಬ ಧ್ವನಿಪೂರ್ಣವಾಗಿವೆ. ಬಾಳಿನ ಅರ್ಥವೇನೋ–ಬಲ್ಲವರಾರು? ಈ ಬಾಳಿಗೊಡೆಯರಾದವರು ಯಾರು?–ವಿಧಿಯೇ? ಪೌರುಷವೇ?–ಧರ್ಮವೇ ? ಅಂಧಸಂಪ್ರದಾಯವೇ? ಮೂಢನಂಬಿಕೆಯೆ? ಗೊಂದಲದಿಂದ ಪ್ರಾರಂಭವಾಗಿ ಆನಂದದಲ್ಲಿ ಪರಿಸಮಾಪ್ತವಾಗುವುದು ಬಾಳಿನ ಲಕ್ಷಣವೆಂದು ಬಲ್ಲವರು ಹೇಳುತ್ತಾರೆ. ಜಗತ್ತಿನ ಎಲ್ಲ ಜನರ ಎಲ್ಲ ಬೇಡಿಕೆಗಳ ಮೂಲ ಉದ್ದೇಶ ಆನಂದವನ್ನು ಪಡೆಯ ಬೇಕೆಂಬುದೇ ಆಗಿದೆ. ಆನಂದಾನುಭವ ಎಲ್ಲರೂ ಪಡೆಯ ಬಯಸುವ ಆದರೆ ಯಾರಿಗೂ ಸುಲಭಗ್ರಾಹ್ಯವಲ್ಲದ ವಸ್ತುವೆಂಬುದು ಸತ್ಯಾಂಶ.

ದೇವರೆಂಬುವುದೇನು?ಜಗವ ನಿರ್ಮಿಸಿದ ಕೈಯೊಂದಾದೊಡೆ ಏಕಿಂತು ಬಗೆ ಬಗೆಯ ಜೀವಗತಿ? ನರಜಾತಿಯೊಳಗೆಂತು ಬಂದುದೀ ವೈಷಮ್ಯ? ಪುರುಷ ಸ್ವತಂತ್ರತೆಯ ಪರಮಸಿದ್ಧಿ ಯದೇನು? ತಳಮಳಕೆ ಕಡೆಯೆಂದೋ? ಇರವಿದೇನೊಣ ರಗಳೆ? ಕ್ರಮವೊಂದು ಲಕ್ಷ್ಯವೊಂದುಂಟೇನು ಸೃಷ್ಟಿಯಲ್ಲಿ?... ಹೀಗೆ ಪ್ರಾರಂಭದಲ್ಲಿ ಪ್ರಶ್ನೆಗಳ ಸರಮಾಲೆಯನ್ನೇ ಕವಿ ಹೆಣೆದಿದ್ದಾರೆ. ಪ್ರಶ್ನೆಗಳ ಉತ್ತರದ ಕೊಡಲಾರದನ ಗುರುವೆಂದು ಕರೆಯುವೆಯಾ?– ಎಂದು ಅವರೇ ಪ್ರಶ್ನೆ ಹಾಕಿಕೊಂಡಿದ್ದಾರೆ. ಜೀವನದ ಈ ಎಲ್ಲ ವಿಚಿತ್ರ ಪ್ರಶ್ನೆಗಳಿಗೆ ಉತ್ತರ, ವಿವ

ರಣೆ ಬೇಕಾದರೆ "ಕಗ್ಗ"–ವನ್ನು ಸಾವಧಾನ ಚಿತ್ತರಾಗಿ ಅಧ್ಯಯನ ಮಾಡಬೇಕು. ಕಗ್ಗ ಎಂದರೆ–ಏನೋ ಕೆಲಸಕ್ಕೆ ಬಾರದ್ದು–ಎಂದರ್ಥ ನಿಜ; ಸಾಮಾನ್ಯ ಜನಕ್ಕೆ ಯಾವುದು ಕೆಲಸಕ್ಕೆ ಬಾರದ ಕಗ್ಗವೋ ಅದರ ಬಗ್ಗೆ ವಿಶೇಷ ಅಧ್ಯಯನ ಮಾಡಿದವನೇ ವಿಜ್ಞಾನಿ, ಚಿನ್ತನ ಮಾಡಿದವನೇ ಜ್ಞಾನಿ

"ಮಂಕುತಿಮ್ಮನ ಕಗ್ಗ"-ಒಂದು ವಿಶಿಷ್ಟ ಜಾತಿಗೆ ಸೇರುವ ಗ್ರಂಥ ಇದರಲ್ಲಿರುವುದು ವಿನೋದವಲ್ಲ–ವಿಷಾದವೂ ಅಲ್ಲ. ಉಭಯಾತ್ಮಕವಾದ ಜೀವನ ಧರ್ಮದರ್ಶನ. ಈ ಗ್ರಂಥ ತುಂಬ ಸುಲಭ, ತುಂಬ ಕಷ್ಟ ವಿವರಣೆ ಕೊಡಲು ಸಾಧ್ಯವಾಗದಷ್ಟು ಸುಲಭ. It is too difficult to be analysed because of its simplicity–ಎಂಬಂತಿರುವ ಈ ಗ್ರಂಥ 1943 ರಲ್ಲಿ ಪ್ರಕಟವಾಯ್ತು. ನಂತರ ಅನೇಕ ಬಾರಿ–ಅನೇಕರೀತಿಯಲ್ಲಿ ತಿದ್ದುಪಡಿ ಮಾಡಲ್ಪಟ್ಟು ಒಂದು ಅಚ್ಚುಕಟ್ಟಾದರೂಪ ಪಡೆದು"ಘನ ಗಂಭೀರ ಗ್ರಂಥ"-ವಾಯ್ತು. ಬಾಳಿನ ವಿವಿಧ ಮುಖಗಳ ಬಗ್ಗೆ ಒಬ್ಬ ಪರಿಪಕ್ವ ಜೀವಿಯ ಅಭಿಪ್ರಾಯಗಳು – ಅನಿಸಿಕೆಗಳು– ಈ ಗ್ರಂಥದಲ್ಲಿ ಕಾಣಬಹುದಾಗಿದೆ ಸಮನ್ವಯವು ಈ ಗ್ರಂಥದ ಒಂದು ಸೊಗಸು "ನೂರಾರು ಮತವಿಹುದು ಲೋಕದುಗ್ರಾಣದಲಿ ಆರಿಸಿಕೊ ನಿನ್ನರುಚಿಗೊಪ್ಪುವುದನದರೊಳ್"– ಎಂಬುವುದು ಡಿವಿಜಿ ಕಂಡ ತತ್ತ್ವ, ಬಾಳಿದರೀತಿ, ನೀಡಿದ ಸಂದೇಶ

'ಕವಯೋಪ್ಯತ್ರಮೋಹಿತಾ'–ಹಿರಿಯ ವಿದ್ವಾಂಸರೂ ಸಹ ದಿಗ್‌ಭ್ರಾಂತರಾಗುತ್ತಾರೆ– ಎಂಬಷ್ಟು ಕಷ್ಟ, ಧರ್ಮ, ಕರ್ಮ, ತತ್ತ್ವ ಜಿಜ್ಞಾಸೆ. ಬಾಳು ಮಾಗಿದೆ – ಪರಿಪಕ್ವವಾಗಿದೆ – ಎಂದರೆ ತುಂಬ ಅನುಭವ ಬಂದಿದೆ ಎಂದರ್ಥ ಅಂತಹ ಗಂಭೀರ ಅನುಭವ ಪಡೆದ ವ್ಯಕ್ತಿ ಚೆನ್ನಾಗಿ ಮನದಟ್ಟು ಮಾಡಿಕೊಂಡಿರುತ್ತಾನೆ– ವಿಶ್ವಜೀವನದ ದಿವ್ಯಾಬ್ಧಿಯಲ್ಲಿ ತಾನೊಂದು ಅಲೆ– ಎಂದು ಅವನು 'ಅಳುವೊಂದು ರಸಪಾಕ ನಗುವೊಂದು ರಸಪಾಕವೆಂದರಿತು ಕೊಂಡಿ'ರುತ್ತಾನೆ. ಜೀವದುದಯ ರಹಸ್ಯ – ಜೀವ ವಿಲಯ ರಹಸ್ಯ – ಈ ರಹಸ್ಯೋದ್ಘಾಟನೆಯೇ ಸಮಗ್ರ ಜೀವನದ ಚರಮಲಕ್ಷ್ಯ–ಪರಮಸಿದ್ಧಿ.

ಲೋಕವಿರುವುದು ಮಮಕಾರ ಬೆಳೆಸಿಕೊಳ್ಳಬೇಕೆಂದಲ್ಲ; ಹಾಗೇನೂ ನಿಯಮವಿಲ್ಲ. ಅದು ಸಾಧ್ಯವೂ ಅಲ್ಲ – ಸೂಕ್ತವೂ ಅಲ್ಲ. ಜಿಹ್ವಾ ಚಾಪಲ್ಯದಿಂದ ನಾವು ತಿನ್ನುವ ಪ್ರತಿಯೊಂದು ವಸ್ತುವೂ ಆರೋಗ್ಯಕ್ಕೆ ಅಷ್ಟೇನೂ ಸಾಧಕ ಸಾಮಗ್ರಿಯಾಗಲಾರದೆಂದು ವೈದ್ಯಶಾಸ್ತ್ರದ ಅಭಿಪ್ರಾಯ. ಅದರೆ ಕಾಯಿಲೆ ನಿವಾರಣೆಯಾಗಬೇಕಾದರೆ ಅನ್ನ – ಅದರಲ್ಲೂ ಪಥ್ಯಾನ್ನ – ಅತ್ಯಗತ್ಯ. ಹಾಗೇನೇ ಮನದ ಶಿಕ್ಷೆಗೆ ಲೋಕ. ಮಮಕಾರಕಲ್ಲ. ಜಗತ್ತನ್ನ ಶಿಕ್ಷಣ ರಂಗವಾಗಿ ತೆಗೆದುಕೊಂಡಾಗ ನಮ್ಮ ಚಿತ್ತಶುದ್ಧಿಗೆ ಅವಕಾಶವಾಗುತ್ತದೆ ಇಲ್ಲವಾದರೆ ಅಧಃ ಪತನಕಾರಣ ವಾಗುತ್ತದೆ. ಚಮತ್ಕಾರದಿಂದ – ಏನನ್ನು ಬೇಕಾದರೂ ಶೋಧಿಸಬಹುದು. ಅದರೆ ಸ್ವಚಿತ್ತಶೋಧನೆಗೆ ಸಂಬಂಧಪಟ್ಟಂತೆ ಅದು ಎಳ್ಳಷ್ಟೂ ಕೆಲಸ ಮಾಡಲಾರದು.

ಜೀವನ್ಮುಕ್ತ – ಮಾತು ಭಾರತೀಯರಿಗೆ ಹೊಸದೇನಲ್ಲ ವೇದಾಂತದಲ್ಲಿ ಎಲ್ಲಿ ನೋಡಿದರೂ ಅದೇ ವಿಚಾರವೇ – ಚರ್ಚೆಯೇ. ಅದರೆ ಹಾಗೆಂದ

(29 ನೇ ಪುಟ ನೋಡಿ)

# ಶ್ರೀ ಗೋಪಾಲ ದಾಸರು

ಕರ್ನಾಟಕದ ಹರಿದಾಸರಲ್ಲಿ ವೈಶಿಷ್ಟ್ಯಪೂರ್ಣಸ್ಥಾನವನ್ನು ಗಳಿಸಿಕೊಂಡವರಲ್ಲಿ ಗೋಪಾಲದಾಸರೂ ಒಬ್ಬರಾಗಿದ್ದಾರೆ.

"ಭಕ್ತಿಯಲಿ ಭಾಗಣ್ಣ" ಎಂಬ ಉಕ್ತಿಯಂತೆ ಪರಮಾತ್ಮನಲ್ಲಿ ಅನನ್ಯವಾದ ಭಕ್ತಿಯಿಂದೊಡಗೂಡಿದ ಇವರನ್ನು ಪರಮಾತ್ಮನೇ 'ತನ್ನೆಡೆಗೆ ಬರಲಿಲ್ಲವೇಕೆ?'ಎಂಬುದಾಗಿ ಕೇಳಿ ಕರೆಸಿಕೊಂಡಿದ್ದಾನೆಂಬುದು ಈ ಕೆಳಗಿನ ಸನ್ನಿವೇಶದಿಂದ ಗೊತ್ತಾಗುತ್ತದೆ.

ಗೋಪಾಲದಾಸರು ಅಶ್ವಾರೂಢರಾಗಿ ಅನೇಕ ಅನುಯಾಯಿಗಳೊಡನೆ ಕ್ಷೇತ್ರಯಾತ್ರೆ ಮಾಡುತ್ತಿದ್ದರು. ಭೂವೈಕುಂಠವೆನಿಸಿದ ತಿರುಪತಿಯ "ಕಾಂಚನಬ್ರಹ್ಮ"ನ ಉತ್ಸವಕ್ಕೆ ತಪ್ಪದೇ ಪ್ರತಿವರ್ಷವೂ ಹೋಗಿ ಬರುತ್ತಿದ್ದರು. ಎಲ್ಲಾ ಕಡೆಗೆ ಸಂಚಾರವಿದ್ದಿತಾದರೂ ಬಹುದಿನಗಳವರೆಗೆ ಪಂಢರಪುರಕ್ಕೆ ಮಾತ್ರ ಹೋಗಿರಲಿಲ್ಲ. ಹೀಗಿರಲು ಒಮ್ಮೆ ತುಳಸಿಯ ಬನಕ್ಕೆ ಹೊರಟಾಗ ಕುದುರೆಯ ಸವಾರನೊಬ್ಬನು ಅವರ ಬೆಂಬತ್ತಿ ಬಂದು ಆಗಿನ ರಾಜ ಭಾಷೆಯಾದ ಮರಾಠಿಯಲ್ಲಿ "ಆಲೇನಾಹಿ?" (ಬರಲಿಲ್ಲ) ಎಂದು ಉಸುರಿ ಅದೃಶ್ಯನಾದನು. ಆಗ ವಿಸ್ಮಿತರಾಗಿ ದಾಸರೇ ಈ ಅನುಭವವನ್ನು ಸುಳ್ಹಾದಿ (ಸುಳಾದಿ) ಯೊಂದರಲ್ಲಿ ವಿವರಿಸಿದ್ದಾರೆ–

ನೀಲ ಕುದುರೆಯನೇರಿ ಶಾಲು ಟೊಂಕಕೆ ಸುತ್ತಿ
ಕಾಲ ಕುಪ್ಪುಸ ತೊಟ್ಟು ಮೇಲೆ ಮೋಹನ್ನ ಹಾಕಿ-
ತೋಳು ತಾಯಿತ, ಶಿರಕೆ ಮೇಲಾದ ವಸ್ತ್ರಸುತ್ತಿ
ಫಾಲಕಸ್ತೂರಿ ಇಟ್ಟು ಮೈಗೆ ಗಂಧವ ಪೂಸಿ
ಪಲಾಯನದಿ ಅಶ್ವವೇರಿ ಹಾರಾಡಿಸುತ್ತ
"ಆಲೇನಾಹಿ" ಎಂದು ಕೇಳಿದನಾರವ್ವ
ವೇಳೆ ಸಾಲದಾಯಿತು ಕೇಳುವದಕ್ಕೆನಗೆ-
. . . . . . . .
ಎಲ್ಲಿ ನೋಡಲು ಮತ್ತಲ್ಲಿ ಸಿರಿ ಬರ
ಲಿಲ್ಲವೆಂಬುವೇನೋ ಗೋಪಾಲವಿಠಲ

ಇದಾದ ನಂತರದಲ್ಲಿ ಗೋಪಾಲದಾಸರು ಪಂಢರಪುರದ "ನಾದಬ್ರಹ್ಮ"ನನ್ನು ಕಂಡು ಹಾಗೆಯೇ 'ಕೊಲ್ಹಾಪುರಗತಕಮಲೆ'ಯನ್ನು ಪ್ರಾರ್ಥಿಸಿಕೊಂಡು ಉಡುಪಿಯ 'ಅನ್ನಬ್ರಹ್ಮ' ನತ್ತ ಯಾತ್ರೆಗೆ ಹೋಗಿ ಬಂದರು.

ಗೋಪಾಲದಾಸರು ಶ್ರೀ ಗಣಪತಿಯ ಅಂಶ ಸಂಭೂತರು. ಶ್ರೀಹರಿಕಥಾಮೃತಸಾರಾದಿ ಮಹಾಕಾವ್ಯ ಕರ್ತೃಗಳಾದ ಜಗನ್ನಾಥದಾಸರು ಅಲ್ಪಾಯುಷಿಗಳಾದುದರಿಂದ ವಿಜಯದಾಸರ ಅಪ್ಪಣೆಯಂತೆ ಇವರಿಗೆ ಗೋಪಾಲದಾಸರು ತಮ್ಮ ಆಯುಸ್ಯದಲ್ಲಿ 40 ವರ್ಷಗಳನ್ನು ಧಾರೆ ಎರೆದು ಚಿರಸ್ಮರಣೀಯರಾಗಿರುವರು.

ವಿಶಾಲ ಕರ್ನಾಟಕ ರಾಜ್ಯದ ರಾಯಚೂರು ಜಿಲ್ಲೆಯ ದೇವದುರ್ಗ ತಾಲೂಕಿನ ಮೊಸರುಕಲ್ಲೆಂಬ ಹಳ್ಳಿಯಲ್ಲಿ 1722ನೆ ಇಸ್ವಿಯಲ್ಲಿ ಜನಿಸಿದರು. ವೆಂಕಮ್ಮ, ಮುರಾರಿರಾಯ ಇವರು ದಾಸರ ಮಾತಾ ಪಿತೃಗಳು. ಇವರಿಗೆ ಭಾಗಣ್ಣನೆಂದು ನಾಮಕರಣವಾಯಿತು. ಇವರಿಗೆ ಮೂರು ಜನ ತಮ್ಮಂದಿರು ಇದ್ದರು.

ಚಿಕ್ಕಂದಿನಲ್ಲಿ ತಂದೆ ತೀರಿ ಹೋಗಿದ್ದರಿಂದ ತಾಯಿಯೇ ಮಕ್ಕಳ ಪೋಷಣೆಯ ಭಾರ ಹೊರಬೇಕಾಯಿತು. ಅವಳು ಎಲ್ಲ ಮಕ್ಕಳನ್ನು ಕಟ್ಟಿಕೊಂಡು ಸರಿತಾಪುರಕ್ಕೆ ಬಂದು ಮಾರುತಿ ದೇವಸ್ಥಾನದಲ್ಲಿ ಉಳಿದುಕೊಂಡಳು. "ದಾರಿದ್ರ್ಯಾತ್ ಮರಣಕ್ಕಿಂತಲೂ ದಾರುಣ" ವೆಂಬ ಆರ್ಯೋಕ್ತಿಯಂತೆ ಬಹು ಕಷ್ಟದಿಂದ ಜೀವನ ಸಾಗಿಸುತ್ತಿದ್ದಳು. ಭಾಗಣ್ಣನಿಗೆ ಕೆಲದಿನಗಳಲ್ಲಿಯೇ ಧರ್ಮೋಪನಯನವಾಯಿತು. ಬಡತನದಿಂದ ಬೇಸತ್ತ ಭಾಗಣ್ಣ ಗಾಯತ್ರೀ ಪುರಶ್ಚರಣ ಮಾಡಿ ವಾಕ್ ಸಿದ್ಧಿಯನ್ನು ಪಡೆದನು ಈ ಪ್ರಭಾವದಿಂದ ಜ್ಯೋತಿಷ್ಯವನ್ನು ಹೇಳಲಾರಂಭಿಸಿದನು. ದ್ರವ್ಯಾರ್ಜನೆಗೆ ದಾರಿಯಾಯಿತು.

ತಪೋನಿಷ್ಠಾಗರಿಷ್ಠನಾದ ಭಾಗಣ್ಣನಿಗೆ ಒಂದು ದಿನ ಸರ್ಪವೊಂದು ಬಂದು ಸುತ್ತಿಕೊಂಡು ತಲೆಯಮೇಲೆ ತನ್ನ ಹೆಡೆಯನ್ನು ಆಡಿಸುತ್ತಿರುವದನ್ನು ಕಂಡು ಜನರು ಬೆರಗಾದರು. ವಿಷಯವು ತಿಳಿದು ಬರಲು ವೆಂಕಮ್ಮನು ಬಂದು ನೋಡಿದಳು. ಮಗನು ಸಾಮಾನ್ಯನಲ್ಲವೆಂಬದನ್ನು ಬಾಲ್ಯದ ಚಿಹ್ನೆಗಳಿಂದ ನೋಡಿ ಅರಿತವಳಾದ್ದರಿಂದ "ಸರ್ಪಭೂಷಣ"ನಾದ ಭಾಗಣ್ಣನನ್ನು ನೋಡಿ ಆನಂದಿಸಿದಳು. ಮೋದಕ ಪ್ರಿಯನಾದ ಗಣಪತಿಯು ಪಕ್ಕದಲ್ಲಿ ಸರಿದು ಹೋಗುತ್ತಿದ್ದ ಸರ್ಪವನ್ನು ಹಿಡಿದು ತನ್ನ ಉದರಕ್ಕೆ ಸುತ್ತಿಕೊಂಡವನಲ್ಲವೇ? ಅದೇ ಗಣಪತ್ಯಂಶ ಸಂಭೂತನಾದ ಭಾಗಣ್ಣನಿಗೆ ಸರ್ಪವು ಬಂದು ಸುತ್ತಿಕೊಂಡರದ್ದರಲ್ಲಿ ಆಶ್ಚರ್ಯವೇನಿಲ್ಲ.

ಭಾಗಣ್ಣನ ಕೀರ್ತಿಯು ದಿನೇ ದಿನೇ ಬೆಳೆಯತೊಡಗಿತು. ನಂತರ ಗದ್ವಾಲ್ ರಾಜನು ಭಾಗಣ್ಣನನ್ನು ಕರೆದು ಸನ್ಮಾನಿಸಿದನು. ಒಮ್ಮೆ ಈ ರಾಜ್ಯನಲ್ಲಿಗೆ ತ್ರಿಲಿಂಗ ದೇಶದ ಕವೀಶ್ವರನು ಸಂಚಾರದಿಂದ ಬಂದು ಬಿಡಾರ ಮಾಡಿದನು. ವಿದ್ವಾಂಸರಿಂದ ಜಯ ಪತ್ರಗಳನ್ನು ತೆಗೆದುಕೊಳ್ಳುತ್ತ ನಡೆದಿದ್ದ ಇವನಿಗೆ

ಶ್ರೀನಿವಾಸಮಠದ, ಬಿ. ಎಸ್. ಸಿ.

ಅಲ್ಲಿಯ ಜನರು ಜಯಪತ್ರ ಕೊಡಲು ಹಿಂತೆಗೆದರು, ಮತ್ತು ಅವನಲ್ಲಿಗೆ ಭಾಗಣ್ಣನನ್ನು ಕಳಿಸಿಕೊಟ್ಟರು. ಆ ಕವೀಶ್ವರನು ಕವಿತ್ವದಲ್ಲಿ ಭಾಗಣ್ಣನಿಗೆ ಸೋತು ಶರಣಾಗತನಾದನು ಭಾಗಣ್ಣನು ನರಸ್ತುತಿಯನ್ನು ಮಾಡಿ ಸರಸ್ವತಿಯನ್ನು ವಿಕ್ರಯಿಸ ಕೂಡದೆಂದು ವಚನ ತೆಗೆದುಕೊಂಡು ಭಗವದ್ಗುಣಗಾನದಿಂದ ಕವಿತ್ವವನ್ನು ಪಾವನಗೊಳಿಸಬೇಕೆಂದು ಉಪದೇಶಿಸಿ ಕಳಿಸಿಕೊಟ್ಟನು. ರಾಜನು ಭಾಗಣ್ಣನಿಗೆ ವಿಶೇಷವಾದ ಮರ್ಯಾದೆಗಳನ್ನು ಮಾಡಿದನು.

ಮುಂದೆ ಭಾಗಣ್ಣನು ಕಾಶೀಯಾತ್ರೆಗೆ ಹೊರಟನು. ಆಗ್ಗೆ ದಾಸಶ್ರೇಷ್ಠರಾದ ವಿಜಯದಾಸರು ಅಲ್ಲಿಗೆ ಬಂದಿದ್ದರು. ದಾಸರ ಶಿಷ್ಯ ಸಂಪತ್ತು ಬೆಳೆಯುತ್ತಲೇ ಇತ್ತು. ಅದರಲ್ಲಿ ಭಾಗಣ್ಣನೂ ಒಬ್ಬನಾದ. ವಿಜಯದಾಸರ ಕೃಪಾದೃಷ್ಟಿ ಭಾಗಣ್ಣನ ಮೇಲೆ ಬಿದ್ದಿತು. ಅಲ್ಲಿಯವರೆಗೆ ಭಾಗಣ್ಣನು "ವಂಕಟ ಕೃಷ್ಣ" ಮುದ್ರಿಕೆಯ ಕವಿತೆಗಳನ್ನು ರಚಿಸುತ್ತಿದ್ದನು. ಇಂದು ವಿಜಯದಾಸರ ಪರಮಾನುಗ್ರಹದಿಂದ ದಾಸ ದೀಕ್ಷೆ ಪಡೆದು "ಗೋಪಾಲ ವಿಠಲ" ಎಂಬ ಅಂಕಿತವನ್ನು ಪಡೆದು 'ಗೋಪಾಲದಾಸ' ನೆಂಬ ಹೆಸರಿನಿಂದ ಪ್ರಸಿದ್ಧನಾದನು.

ಗೋಪಾಲದಾಸರು 'ಕಾಂಚನಬ್ರಹ್ಮ' 'ಅನ್ನ ಬ್ರಹ್ಮ' ಮತ್ತು 'ನಾದಬ್ರಹ್ಮ' ಇವರುಗಳ ಮೇಲೆ ಅನೇಕ ಪದ ಸುಳಾದಿಗಳನ್ನು ರಚಿಸಿದರು. ತಮ್ಮ ಮೂವರು ತಮ್ಮಂದಿರಿಗೆ 'ಗುರು ಗೋಪಾಲವಿಠಲ' 'ವರದ ಗೋಪಾಲ ವಿಠಲ', ಮತ್ತು 'ತಂದೆ ಗೋಪಾಲವಿಠಲ' ಎಂಬ ಅಂಕಿತಗಳನ್ನಿತ್ತು ದಯಪಾಲಿಸಿದರು

ದಾಸರು ನಿತ್ಯದಲ್ಲಿಯೂ ಹರಿಭಜನೆ ಮಾಡುತ್ತಿದ್ದರು. ಅವರ ಕೀರ್ತನೆಗಳನ್ನು ಕೇಳಲು ಭಕ್ತರು ವಿದ್ವಾಂಸರು ಬರುತ್ತಿದ್ದರು ವೆಂಕಟರಾಮಾಚಾರ್ಯರೆಂಬವರು ಒಂದು ದಿನ ಕೂಡತಪ್ಪದೇ ಹಾಜರಿರುತ್ತಿದ್ದರು. ಒಮ್ಮೆ ಅವರ ತಂದೆ ವೆಂಕಟನರಸಿಂಹಾರ್ಯರು, ಹೆಂಡತಿ ಹಾಗೂ ಮಗನ ಬಲವಂತಕ್ಕೆ ಭಜನೆಗೆ ಬಂದರು. ದಾಸರ ಕೀರ್ತನೆ ಆರಂಭವಾಯಿತು. ಮಹಾಭಾರತ ಪ್ರವಚನ ಕಾಲದಲ್ಲಿ ಅಶ್ವತ್ಥಾಮಾಚಾರ್ಯರಿಗೂ, ಶ್ರೀಮದ್ ಭಾಗವತ ಸಪ್ತಾಹಕಾಲದಲ್ಲಿ ಶುಕಾಚಾರ್ಯರಿಗೂ ಪೀಠಗಳನ್ನು ಹಾಕಿ ಪುರಾಣ ಹೇಳುವ ಸತ್ ಸಂಪ್ರದಾಯವು ನಡೆದು ಬಂದಿದೆ. ಗೋಪಾಲದಾಸರು ಕೀರ್ತನೆ ಕಾಲಕ್ಕೆ ಎದುರಿಗೆ ಒಂದು ಬೆಳ್ಳಿಯ ಮಣೆಯನ್ನು ಹಾಕಿ-ಅದರ ಕಡೆಗೆ ನೋಡುತ್ತ ಕೀರ್ತನೆ ಮಾಡುವದು ಪದ್ಧತಿಯಾಗಿತ್ತು. ಆದರೆ ಆ ಮಣೆಯನ್ನು ಏಕೆ ಹಾಕಿರುವರೆಂಬುದು ಯಾರಿಗೂ ತಿಳಿಯದು. ವೆಂಕಟನರಸಿಂಹಾಚಾರ್ಯರಿಗೆ ಮಾತ್ರ ಆ ಮಣೆಯ ಮೇಲೆ ಮಾರುತಿಯು ಕುಳಿತು ಕೀರ್ತನೆ ಕೇಳುತ್ತಿರುವುದು ಕಂಡಿತು. ಮಗನಿಗೆ ಇತರರಂತೆ ಮಣೆಯಷ್ಟೆ ಕಂಡಿತು. ಮಾರುತಿ ದರ್ಶನವಾಗಲಿಲ್ಲ. ಆನಂತರ ತಂದೆ ಮಕ್ಕಳು ಮಾತನಾಡಿಕೊಂಡು ಚಕಿತರಾದರು

ಆಗ್ಗೆ ಉತ್ತರಾದಿ ಮಠದಲ್ಲಿ ಶ್ರೀ ಸತ್ಯಬೋಧ ತೀರ್ಥರು ವಿರಾಜಮಾನರಾಗಿದ್ದರು. ಒಮ್ಮೆ ಅಪರೋಕ್ಷಜ್ಞಾನಿಗಳೆಂದು ಹೆಸರಾದ ಗೋಪಾಲದಾಸರನ್ನೂ ಅವರ ತಮ್ಮಂದಿರನ್ನೂ ಶ್ರೀ ಸತ್ಯಬೋಧರು ಪ್ರತ್ಯೇಕವಾಗಿ ಬೇರೆ ಬೇರೆ ಕೋಣೆಗಳಲ್ಲಿ ಕುಳಿತು ಒಂದು ಪದವನ್ನು ಪೂರ್ಣಮಾಡಲು ಹೇಳಿದರು.

"ಮಾರಮದಘನ್ನ ಸವಿಸ್ತ್ರರ
ಮಧ್ವ ಮತೋ
ದ್ಧಾರ ಶುಭಗುಣಸಾಗರ! ಪಾರಾ
ಧೀರ ಶ್ರೀ ಸತ್ಯಬೋಧಾರ್ಯ ಗುರು
ಕರುಣದಲಿ
ವೈರಿವರ್ಗವ ಗೆಲಿದೆ ಧಾರುಣಿಯೊಳು
ಮೆರೆದೆ

ಎಂಬುದಾಗಿ ಗೋಪಾಲದಾಸರು ರಚಿಸಿದರು. ಇನ್ನುಳಿದ ಭಾಗಗಳನ್ನು ತಮ್ಮಂದಿರು ರಚಿಸಿಕೊಟ್ಟರು. ಅವುಗಳನ್ನವಲೋಕಿಸಿದ ಶ್ರೀ ಸತ್ಯಬೋಧರು ಆನಂದ ಭರಿತರಾಗಿ ಮಧ್ವಮತಕ್ಕೆ ದಾಸತ್ರಯರು ಕಾಮಧೇನು ಕಲ್ಪವೃಕ್ಷ, ಚಿಂತಾಮಣಿಗಳೆಂದು ಅಭಿನಂದಿಸಿ ಗೌರವಿಸಿದರು.

ಗೋಪಾಲದಾಸರು ಬಿಂಬಾಪರೋಕ್ಷಿಗಳಾಗಿ ಸಿದ್ಧಿ ಪಡೆದು ಜೀವನ್ಮುಕ್ತರಾದರೂ

ಲೋಕ ಸಂಗ್ರಹಾರ್ಥವಾಗಿ ನೀಡಿದ ಸಾಹಿತ್ಯಬಲ್ಲ ಅವರ ಸಾಧನ, ಬೋಧನೆ ಎರಡೂ ಮೂಡಿಬಂದಿವೆ. ಇವರು ಸುಳಾದಿಗಳಲ್ಲಿ ಜ್ಞಾನ ಭಕ್ತಿ ವೈರಾಗ್ಯಗಳ ಬಗೆಗೆ ವಿಶದವಾಗಿ ಬೋಧಿಸಿರುವರಲ್ಲದೆ ಮಧ್ವಮತಾನುಸಾರವಾದ ಪ್ರವೃತ್ತಿ ನಿವೃತ್ತಿಗಳ ಸ್ವರೂಪವನ್ನು ತಿಳಿಸಿ ಕೊಟ್ಟಿದ್ದಾರೆ. ಸರಳರಗಳೆಯಂತೆ ಹರಿಯುವ ಸುಳಾದಿಗಳು ತತ್ತ್ವ ವಿವರಣೆಗೆ ಅನುಕೂಲವೆನಿಸಿದ್ದು, ವಿಜಯದಾಸರ ನಂತರ ಹೆಚ್ಚು ಸುಳಾದಿಗಳನ್ನು ರಚಿಸಿ ತತ್ತ್ವಾನುಷ್ಠಾನವನ್ನು ಬೋಧಿಸಿದವರು ಇವರೇ. ಮನುಷ್ಯನು ಇಹಲೋಕದಿಂದ ಮುಕ್ತಿ ಪಡೆಯಲು ವೈರಾಗ್ಯವೇ ತಾರಕ ಮಾರ್ಗ. ಆದರೆ ಈ ವೈರಾಗ್ಯ ತಾಳುವುದು ತುಂಬಾ ಕಠಿಣದ ಕೆಲಸ. ಭಗವಂತನಾದ ಶ್ರೀ ಹರಿಯು ಈ ಜೀವನನ್ನು ಭೂಮಿಯಲ್ಲಿ ಕೆಡವುತ್ತಲೇ ಅನೇಕ ವಿಧದ ವ್ಯಾಪಾರಗಳನ್ನು ಹಚ್ಚಿ ಬಿಡುತ್ತಾನೆ. ಆದ್ದರಿಂದ ಇಂಥ ವ್ಯಾಪಾರಗಳೊಳಗಿಂದ ಪಾರಾಗಿ ಮುಕ್ತಿ ಸಾಧನೆಗೈಯುವವನೇ ಮಹಾವ್ಯಕ್ತಿಯೆಂಬ ತತ್ತ್ವವು ದಾಸರ ಕೀರ್ತನೆಗಳಲ್ಲಿ ಕಂಡು ಬರುತ್ತದೆ. 'ನಾನು ಸ್ವತಂತ್ರ, ನಾನು ಏನು ಮಾಡಿದರೂ ನಡೆಯುತ್ತದೆ' ಎಂಬ ಅಹಂಕಾರದಲ್ಲಿ ಮನುಷ್ಯನು ತೊಳಲಾಡದೇ "ಸಕಲವೂ ಶ್ರೀ ಹರಿ ಸೇವೆ" ಯೆಂದು ಸಮರ್ಪಿಸಿಕೊಳ್ಳುವದೇ ಮಾನವಜನ್ಮದ ಸಫಲತೆಯ ಗುಟ್ಟು ಎಂಬುದಾಗಿ ಸಾರಿದ್ದಾರೆ. ಅರಿಷಡ್ವರ್ಗಗಳ ಸುಳಿಗೆ ಸಿಲುಕದೇ ಅವುಗಳನ್ನು ಮೆಟ್ಟಿ ನಿಂತಾಗ ಆತನ ಹೃದಯವು ಹರಿನಾಮದ ಬೀಜ ಬಿತ್ತಲು ಯೋಗ್ಯವಾಗುತ್ತದೆಂದು ಸಾರಿಸಾರಿ ಹೇಳಿದ್ದಾರೆ — ಗೋಪಾಲದಾಸರು ಸಾಮಾನ್ಯ ಸಾಧಕನಂತೆ—

ಶ್ರೀಶ ಸಂಸ್ಕಾರವೆಂಬೋ ಸೂಸುವ
ಶರಧಿಯೊಳು।
ಈ ಸಲಾರೆನೋ ಹರಿಯೇ।

ಎಂಬ ಅಸಹಾಯಕತೆಯಿಂದ ರಕ್ಷಣೆಗೆ ಮೊರೆಯಿಟ್ಟು

ಪರಿ ಪರಿಯಿಂದಲಿ ಶಿರವಮುಗಿದು ನಿನ್ನ।
ಕರೆದರೆ ಬಾರದ ಗರುವತನವು ಏನೋ।
ಕರಿಯು ಮೊರೆಯು ಕೇಳಿ ಸಿರಿಗೆ ಹೇಳದೆ
ಬಂದೆ।

ಕರಿರಾಜ ಆವ ನಿನ್ನ ಹಿರಿಯಪ್ಪನ
ಮಗನೇನೋ।

ಎಂದು ಸಲುಗೆಯಲ್ಲಿ ಆಕ್ಷೇಪಿಸುವುದು ಪರಮಾತ್ಮನನ್ನೇ ನಿರುತ್ತರನನ್ನಾಗಿ ಮಾಡುವಂತಿದೆ—

ನಾನೇ ಭ್ರಮಿಸಿದೆನೋ ವಿಷಯದಿ
ಮುನ್ನ ನೀನೇ ಸೃಜಿಸಿದೆಯೋ

ಎಂದು ಅವನ ಬಂಧಕ ಶಕ್ತಿಯನ್ನು ಊಹಿಸುತ್ತ,

ಕಕ್ಕಸ ಭವದೊಳು ಠಕ್ಕಿಸಿ ಸಿಗಹಾಕಿ।
ಸಿಕ್ಕು ಬಿಡಿಸದೇ ನೀ
ನಕ್ಕು ಸುಮ್ಮನಿರಲು। ದಿಕ್ಕ್ಯಾರೋ
ಎನಗೆ
ಜ್ಞಾನರಹಿತನಾಗಿ ನಾನಿನ್ನ ಮರೆತರೆ।
ನೀನು ಮರೆತದ್ದೇಗೋ

ಎಂದು ಪ್ರಶ್ನಿಸುತ್ತ ಎಲ್ಲಭಾರವೂ ಅವನದೆಂಬ ಆರೋಪಗೈದಿದ್ದಾರೆ. ಸರ್ವಸ್ವತಂತ್ರನಾದ ವಿಷ್ಣುವೇ ಕಾರಣಪುರುಷೋತ್ತಮನಾದರಿಂದ—

ತಿಳಿವೆಂಬುವ ನೀನೇ ತಿಳಿದು ತಿಳಿಸುವ
ನೀನೆ।
ತಿಳಿವ ವಸ್ತುವು ನೀನೇ ತೀರ್ಥಪದನೆ।
ತಿಳಿದುದಕೆ ಫಲನೀನೇ ತಿಳಿಯಗೊಡದವ
ನೀನೇ।
ತಿಳಿವ ಸ್ವತಂತ್ರ ನಿನ್ನದು ತಿಳಿಸೋ
ಸರ್ವೇಶ।
ತಿಳಿವಲ್ಲಿ ತಿಳಿಪಲ್ಲಿ ತಿಳಿವಾಳಿಕೆ ನೀನಾಗಿ।
ಚಲಿಸದಲೆ
ಮನ ನಿಲಿಸೋ ಗೋಪಾಲವಿಠಲ

ಎಂಬುದಾಗಿ ದಾಸರು ಕೇಳಿಕೊಂಡಿದ್ದಾರೆ—

ಗೋಪಾಲದಾಸರು ತಿರುಪತಿ ತಿಮ್ಮಪ್ಪನನ್ನು ಪೊಗಳುವ ಭಾವ ಮನಮುಟ್ಟುವಂತಿದೆ—

ಬಾರಯ್ಯ ಬಾ ಬಾ ಭಕುತರ ಪ್ರಿಯ
ಶ್ರೀನಿವಾಸರಾಯ
ಮಾರಜನಕ ಮುಕುತರೊಡೆಯ
ದೇವಯ್ಯ ಜೀಯಾ॥

ವಾರಿಜಾಲಯಪತೇ ವಾರಿಜನಾಭನೆ
ವಾರಿಜಭವಪಿತ ವಾರಿಜ ನೇತ್ರನೆ
ವಾರಿಜ ಮಿತ್ರ ಅಪಾರ ಪ್ರಭಾವನೆ
ವಾರಿಜಾಂಡದ ಕಾರಣಮೂರುತಿಯೆ॥

ಇನ್ನು

"ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ
ವಿಶ್ವತೋ ಬಾಹುರುತ ವಿಶ್ವತಸ್ಪಾತ್"

ಎಂಬ ಮಂತ್ರದಲ್ಲಿ ಬರುವ ಅಂಶವನ್ನು ಒಂದು ಪದ್ಯದಲ್ಲಿ ಅಂದವಾಗಿ ವರ್ಣಿಸಿ ತಿಳಿಸಿ ಕೊಟ್ಟಿದ್ದಾರೆ—

ವಿಶ್ವತೋಮುಖ ನೀನೇ ವಿಶ್ವತಶ್ಚಕ್ಷು
ನೀನೇ।
ವಿಶ್ವತೋ ಬಾಹು ನೀನೇ ವಿಶ್ವತೋ
ಹಸ್ತನೀನೇ।
ವಿಶ್ವತಃಶ್ರವಣನೀನೇ ವಿಶ್ವಧಾರಕ ನೀನೇ।
ವಿಶ್ವವ್ಯಾಪಕ ಸರ್ವ ವಿಶ್ವಮಯನು
ನೀನೇ।
ವಿಶ್ವನಾಮಕ ಹರಿ ಗೋಪಾಲವಿಠಲ
ವಿಶ್ವಾಸಕೊಡು ನಿನ್ನ ವಿಶ್ವಚರಣದಲ್ಲಿ॥

'ವಿಶ್ವ' ನಾಮಕ ಶ್ರೀ ಹರಿಯನ್ನು ಎಷ್ಟು ಪೊಗಳಿ ಕೊಂಡಾಡಿದರೂ ದಾಸರಿಗೆ ಸಾಲದು. ಅಂತೆಯೇ—

"ತಕ್ಷಕಸುತ ಸಹಸ್ರಾಕ್ಷನ ಮಗನನು
ಭಕ್ಷಿಸೆ ಬರುತಿರೆ ಈಕ್ಷಿಸಿ ರಥವನು
ತತ್‌ಕ್ಷಣ ನೆಲಕೊತ್ತಿ ಮೋಕ್ಷವನ್ಗೈಸಿದೆ
ಕುಕ್ಷಿಯೊಳಗೆ ಜಗವ ರಕ್ಷಿಪ ವಿಶ್ವ"

ಎಂದಾಗಿ ಹಾಡಿದ್ದಾರೆ. ಇನ್ನೊಂದು ಕಡೆಗೆ ಗೋಪಾಲದಾಸರು ಪೌರಾಣಿಕ ದೃಷ್ಟಾಂತಗಳಿಂದ ಐಹಿಕ-ಭೋಗ ಭಾಗ್ಯಗಳು ಸದ್ಗತಿಯನ್ನು ಕೊಡಲಾರವು ಎಂದು ತಿಳಿಸಿಕೊಡುವುದು ಮನೋಹರವಾಗಿದೆ—

ಏನು ಬೇಡಲಿ ನಿನ್ನ ಬಳಿಗೆ ಬಂದು।
ನೀನಿತ್ತ ಸೌಭಾಗ್ಯ ನಿಬಿಡವಾಗಿದೆ.
ಎನಗೆ
ಜನನಿಯ ಕೊಡು ಎಂದು ಜಗದೀಶ
ಬೇಡವೆನೆ
ಜನನಿ ಏನಿತ್ತಳಾ ಧ್ರುವರಾಯಗೆ

ಜನಕನ ಕೊಡು ಎಂದು ಜಯವಂತ
ಬೇಡುವೆನೆ
ಜನಕನೇನಿತ್ತನಾ ಪ್ರಲ್ಹಾದಗೆ ।
ಸತಿಯಳನು ಕೊಡು ಎಂದು ಸುಖದಿ
ನಾ ಬೇಡುವೆನೆ
ಸತಿಯಿಂದ ದ್ಯುನಾಮಕನು ಏನಾದನೋ
ಸುತರನ್ನು ಕೊಡು ಎಂದು ಸಖ್ಯದಿ
ಬೇಡುವೆನೆ
ಸುತರಿಂದ ಧೃತರಾಷ್ಟ್ರ ಗತಿಯೇನು
ಕಂಡಾ

ಆದ್ದರಿಂದ ಆ ಪರಮಾತ್ಮನಲ್ಲಿ ಜ್ಞಾನ ಭಕ್ತಿ ವೈರಾಗ್ಯಗಳನ್ನು ಕೇಳಿಕೊಳ್ಳಬೇಕೆ ಹೊರತು ಸತಿ-ಸುತ- ಸಂಪತ್ತುಗಳನ್ನು ಬೇಡಬಾರದು ಎಂಬುದನ್ನು ಸಿಕ್ಷಯಿಸಿ ತಿಳಿ ಹೇಳಿದ್ದಾರೆ–

ಇದರಂತೆ, "ವಿಷಯಾಸಕ್ತಿ ನಿರಾಕರಣ ಸುಳಾದಿ ಮತ್ತು ಸಾಹಂಕಾರ ಖಂಡನ- ಸುಳಾದಿ ಮುಂತಾದವುಗಳಲ್ಲಿಯು ಬೋಧ ನೆಯು ಚೆನ್ನಾಗಿ ಮೂಡಿ ಬಂದಿದೆ-

'ಸ್ವಾಂಬಕಾರ ಖಂಡನ' ಸುಳಾದಿಯಲ್ಲಿ-
ನಿನ್ನಚಿತ್ತ ಎನ್ನ ಭಾಗ್ಯ ಇನ್ನು
ಬೇರಿನಗಿಲ್ಲ
ಎನ್ನದೆಂಬಹಂಕಾರ ಬಿಡಿಸೋ ದೇವ
ಎನ್ನ ಸಂಕಲ್ಪವೆಲ್ಲ ನಿನ್ನ ಅಧೀನವಯ್ಯ
ನೀನು ಕುಣಿಸಿದಂತೆ ನಾನು ಕುಣಿವೆನಯ್ಯ

ಎನ್ನುತ್ತ ಪ್ರತಿಯೊಬ್ಬರೂ 'ಮಮಕಾರ' ಗಳನ್ನು ತೊರೆದು ಪರಮಾತ್ಮನಲ್ಲಿ ಶರಣಾಗ ತಿಯನ್ನು ಹೊಂದಬೇಕು ಎಂಬುದಾಗಿ ತಿಳಿ ಸಿದ್ದಾರೆ.

'ಯೋವೇದ ನಿಹಿತಂ ಗುಹಾಯಾಂ ಪರಮ ವ್ಯೋಮನ್' ಎಂಬ ಶ್ರುತಿ ವಾಕ್ಯದಂತೆ ಭಗವಂತನನ್ನು ಬಾಹ್ಯದೇಗು ಲಗಳಲ್ಲಿ ಕಾಣುವುದಕ್ಕಿಂತ ಹೃದಯಾಂತ ರಂಗದಲ್ಲಿ ಕಾಣುವುದೇ ಶ್ರೇಷ್ಠವಾದ್ದರಿಂದ 'ಬಿಂಬರೂಪೀ' ಪರಮಾತ್ಮನನ್ನು ಗೋಪಾಲದಾಸರು,

ಗಟ್ಟಿಭಕುತಿ ಪಾಶದಿಕಟ್ಟಿ ಎನ್ನುದರ
ದೊಳು ಇಟ್ಟುಕೊಂಬೆನೋ
ಸ್ಪಷ್ಟರೂಪ ತೋರೋ ಮುಟ್ಟಿ
ಪೂಜಿಸಲು-

.................................

ರಂಗ ದಿನದಿನ ಮಾಡಿದ ಕರ್ಮವೇಕಪ್ಪ
ತುಂಗ ವಿಕ್ರಮ ಜಠರಾ ಆರತಿ ತು-
ರಂಗವದನ ಸವಾಂಗ ಸಮರ್ಪಿಸಿಕ
ರಂಗಳ ಮುಗಿವೆ ಎನ್ನಂತರಂಗದಿ ನಿಲ್ಲೋ
ಎಂದಿಗಾದರೂ ನಿನ್ನ ಬಳಿಗೆ ಬಾಹೋದೆ
ಸತ್ಯ
ಇಂದೇ ಮುಂದಕೆ ಕರೆಯೋ ಗೋಪಾಲ
ವಿಠಲ

ಎಂದಾಗಿ ಬೇಡುತ್ತ ಸರ್ವರೂ ನಿತ್ಯದಲ್ಲಿ ಈ 'ಬಿಂಬಾರಾಧನೆ'ಯನ್ನು ಮಾಡಬೇಕು ಎಂದು ಸಾರಿ ಹೇಳಿದ್ದಾರೆ.

ಇನ್ನೊಂದೆಡೆಗೆ ದಾಸರು 'ಮಾನಸಪೂಜಾ ವಿಧಿ' ಯನ್ನು ಮನಸ ಸುಳಾದಿಯಲ್ಲಿ ಮನ ತುಂಬುವಂತೆ ಬೋಧಿಸಿದ್ದಾರೆ–

ನಂದ ಗೋಪನ ಕಂದ ಗೋಪಾಲ
ವಿಠಲನ್ನ
ಚಂದದಿ ನಿನ್ನ ಮನ ಮಂದಿರದೊಳುತಿಳಿ
ತನುವ ಮಂಟಪಮಾಡು ಮನದೆ ಪೀಠ
ಇಡು
ನೆನೆದು ಕುಳ್ಳಿರಿಸು ನಿನ್ನ ಒಳಗಿದ್ದ
ಮೂರ್ತಿಯ
ಅಣುಮಹಾ ಮೂರ್ತಿಗೆ ಅಭಿಷೇಕ
ಮಾಡಿಸು

........................ ... ........

ಒಳಗೆ ಬಂದರೆ ನಿನ್ನ ಒಳಗೆ ಇರುತಲಿಪ್ಪ
ಸುಳಿಯುತಿಪ್ಪ ನಿನ್ನ ಸುತ್ತ ಬಿಡದೆ
ಚೆನ್ನ .....

ಹೀಗೆ ಶ್ರೀ ಗೋಪಾಲದಾಸರು ಇನ್ನು ಅನೇಕ ಪದ ಸುಳಾದಿಗಳಲ್ಲಿ ಮುಕ್ತಿ ಸಾಧನ ತತ್ತ್ವವನ್ನು ಜನ ಸಾಮಾನ್ಯರಿಗೆ ಹಿಡಿಸುವ ರೀತಿಯಲ್ಲಿ ಬೋಧಿಸಿ, ದ್ವೈತಸಿದ್ಧಾಂತವನ್ನು ದಾಸ ಸಾಹಿತ್ಯದಲ್ಲಿ ಅಳವಡಿಸಿ ಗಣನೀಯ ಸೇವೆ ಸಲ್ಲಿಸಿದ್ದಾರೆ.

ಒಟ್ಟಿನಲ್ಲಿ – ಹರಿದಾಸ ಪರಂಪರೆಯನ್ನು ಉಜ್ವಲವಾಗಿ ಬೆಳೆಸಿದ ದಾಸರಲ್ಲಿ ಶ್ರೀ ಗೋಪಾಲದಾಸರು ಪ್ರಮುಖರಾಗಿದ್ದಾರೆಂದು ಧಾರಾಳವಾಗಿ ಹೇಳಬಹುದು–



# ಹರಿದಾಸರು

— ಶ್ರೀನಿವಾಸಮೂರ್ತಿ, ವಿ.

ಶ್ರೀಹರಿಗೆ, ಸೃಷ್ಟಿಯಲ್ಲಿನ ಸಕಲರೂ ದಾಸರು ಶ್ರೀ ರಮೆಯೇ ಪ್ರಥಮ ದಾಸಿ. ಋಜುಗಣಾಧಿಪರೂ ಜೀವೋತ್ತಮರೂ ಭೃತ್ಯೋತ್ತಮರೂ ಹರಿಯ ಮುಖ್ಯ ಪ್ರತಿಬಿಂಬರೂ ಆದ ಬ್ರಹ್ಮವಾಯುಗಳು ಪ್ರಥಮದಾಸರೇ. ಅನಂತರದಲ್ಲಿ ಬಂದ ಪ್ರತಿಯೊಬ್ಬರೂ ತಾರತಮ್ಯತ್ವೇನ ದಾಸರೇ ಹೌದು ದೇವತಾಗಣದಲ್ಲಿ – ಪಕ್ಷಿರಾಜನಾದ ಶ್ರೀ ಗರುಡ, ಸರ್ಪರಾಜನಾದ ಶ್ರೀ ಶೇಷ ಇವರು ಶ್ರೇಷ್ಠ ಹರಿದಾಸರೇ ಹೌದು. ಮುಂದೆ ವಾಯುದೇವರು ತಳೆದ ವಾನರ ರೂಪವಾಗಲೀ, ಅವರ ಸಹಚರರಾಗಿದ್ದ ರಾಮಸೇವಕ ಕಪಿಗಳಾಗಲೀ, ಶ್ರೀ ಟೀಕಾಚಾರ್ಯರ ಪೂರ್ವ ವೃಷಭರೂಪವಾಗಲೀ, ಶ್ರೀ ವಿಜಯದಾಸರ ಪೂರ್ವ ತುರುಕರು ರೂಪ ಗಳಾಗಲೀ, ತೋರಿಸುವುದೇನೆಂದರೆ ಹರಿದಾಸ್ಯವು ದೇವ – ಮಾನವ ಕುಲಗಳಿಗಷ್ಟೇ ಸೀಮಿತವಾಗದೆ, ಪ್ರಾಣಿ ಕುಲಕ್ಕೂ – ಅಷ್ಟೇಕೆ ಪ್ರಹ್ಲಾದರಾಜ, ವಿಭೀಷಣರು ಬಂದ ದಾನವ ಕುಲಕ್ಕೂ ಪಸರಿಸಿರುವಂತಹುದು ಎಂಬುದನ್ನೇ.

ಹರಿದಾಸವಾಣಿಯನ್ನಾಧರಿಸಿಯೇ ಅವರ ವಿಚಾರ ತಿಳಿಯಬೇಕು ಹರಿದಾಸರು ಹರಿಭಕ್ತರು ಹರಿಭಕ್ತರ ಸಲ್ಲಕ್ಷಣಗಳೆಲ್ಲವೂ ಅವರಲ್ಲಿ ಕಾಣಿಸಿದುವು ಪಾಂಡುರಂಗನನ್ನು ಕೊಂಡಾಡುವ ಮಂಗಳಾತ್ಮರವರು. ಹರಿಯಲ್ಲದೆ ಅನ್ಯ ದೈವವರಿಯದೆ, ಅವನ ಅನಿಮಿತ್ತೋಪಕಾರ ಮರೆಯದೆ, ಪರತತ್ತ್ವವಲ್ಲದೆ ಇತರವನ್ನರಿಯದೆ, ಮೂಕ ಕಿವುಡರಂತಿದ್ದು, ಕಾಕುನುಡಿ ಬಿಟ್ಟು, ಸರ್ವವನ್ನೂ ಹರಿಗರ್ಪಿಸುತ್ತ, ಆತನಿಗರ್ಪಿತವಾದುದನ್ನೇ ಸ್ವೀಕರಿಸುವಂತಹವರು. ಭೋಗ ವರ್ಜಿಸಿ, ಜಯ–ಅಪಜಯ, ಲಾಭ-ಅಲಾಭ, ಸುಖ ದುಃಖ, ಲೋಷ್ಟ–ಕಾಂಚನ, ಪ್ರಿಯ–ಅಪ್ರಿಯ ನುಡಿಗಳು, ಸ್ತೋತ್ರ–ನಿಂದೆ ಇವೆಲ್ಲವೂ ಹರಿಯಾಧೀನವೆನ್ನುವರು. ಪೂಜಾರ್ಹರಾದ ಅವರು, ಏಕಾಂತ ಭಕ್ತರು, ಶಾಪಾನುಗ್ರಹ ಶಕ್ತರು, ದೇಶಕಾಲಕ್ಕುಚಿತವೇನೆಂದು ವಿವೇಚಿಸಿ ಧರ್ಮಾಚರಣೆಯಲ್ಲಿ ತೊಡಗುವಂತಹವರು. ಎಲ್ಲೆಡೆ ಹರಿಯನ್ನೇ ಕಂಡು, ಉಂಡು ಉಟ್ಟಿದ್ದೆಲ್ಲ ಹರಿಪ್ರೀತಿಗಾಗಿ ಮಾಡಿದ ಯಜ್ಞವೆಂದೇ ಭಾವಿಸುವವರು. ತಮ್ಮ ಪರಿವಾರವೆಲ್ಲವೂ ತಮ್ಮಸೇವಕರಲ್ಲವೆಂದೂ, ಶ್ರೀ ಹರಿಯ ಸೇವಕರು ಮಾತ್ರವೆನ್ನುತ್ತ, ಸದಾ ಹರಿನಾಮ ಸವಿಯುತ್ತ, ಸ್ವಧರ್ಮದಲ್ಲಿಯೇ ರತರಾಗಿ ಇತರರಲ್ಲಿ ದೈನ್ಯಬಡದೆ, ಹರಿ ದ್ವೇಷಿಗಳನ್ನು ಹತ್ತಿರ ಹಾಯಗೊಡದೆ, ಲೋಕವಂದ್ಯರಾಗಿ, ಬೇಡಿದಿಷ್ಟಾರ್ಥ ಕೊಡಬಲ್ಲ ಮಹಾಮಹಿಮರು–ನಿತ್ಯಾನಂದರು. ಹರಿಯನ್ನು ನೆನೆ ನೆನೆದು, ನಕ್ಕು ನಲಿದು, ಹಾಡಿ ಕುಣಿದು, ಆನಂದಭಾಷ್ಪ ಕೋಡಿ ಹರಿಸುವಂತಹವರು. ಅವರು ನಿಶ್ಚಯ ಜ್ಞಾನವಂತರು, ಅಚ್ಚ ಭಾಗವತರು, ಅಚ್ಯುತಾಂಘ್ರಿನಿಷ್ಠರು, ಯದೃಚ್ಛಾ ಲಾಭತುಷ್ಟರು, ಸ್ವತಂತ್ರಮೂರ್ತಿ ಹರಿಯನ್ನೇ ಸ್ನೇಹ ಪಾಶದಿಂದ ಬಿಗಿದಿಟ್ಟಿರುವರು. ಹರಿಯನ್ನರಿತವರು ಸಂಗಮಾತ್ರದಿಂದ ಲಿಂಗಭಂಗ ಮಾಡಬಲ್ಲ ಶಕ್ತಿಯುಳ್ಳವರು, ಹಲವರು ಅಂಗವು ಅಷ್ಟಾವಕ್ರವಾಗಿ ಘೋರ ರೂಪದಿಂದಿದ್ದು, ಅಂತರಂಗ ಭಕ್ತರಾಗಿರುವಂತಹವರು. ಸಜ್ಜನ ಸಂಗದಲ್ಲಿದ್ದು ಲೋಕಜನರಂತಿರದೆ, ಹೊಟ್ಟೆ ತುಂಬಲು ಸಹ ಚಾಡಿ ಛಿದ್ರಗಳನ್ನು ಅವಲಂಬಿಸದವರು ದಾಂಬಿಕತನದ ಡೊಂಬರ ಕುಣಿತಗಳನ್ನೊಲ್ಲದೆ, ಅನ್ಯಹಂಬಲರಿಯದೆ, ಬಿಂಬಮೂರ್ತಿಯನ್ನೇ ಕೊಂಡಾಡುವಂತಹವರು ಅವರಿಗೆ ಶತ್ರು–ಮಿತ್ರರು ಸಮ. ಪುತ್ರ–ಭ್ರಾತರಲ್ಲಿ ನೆಚ್ಚಿಕೆಯಿಡದೆ, ಯಾತ್ರೆ–ತೀರ್ಥಗಳಲ್ಲಿಯೇ ಆಯುಷ್ಯವನ್ನು ಸವೆಸಿ, ಸ್ತೋತ್ರದಿಂದ ಸಾಧನೆಮಾಡಿಕೊಳ್ಳುವಂತಹವರು, ಕಷ್ಟ–ಸುಖ, ಇಟ್ಟುದು-ತೊಟ್ಟುದು ಇವೆಲ್ಲವೂ ಹರಿ ಕೊಟ್ಟುದೆನ್ನುತ್ತ ಅವನ ಪಾದ ಮುಟ್ಟಿ ಭಜಿಸುವವರು. ಆದರೂ ಹನುಮ–ಭೀಮ–ಮಧ್ವರ ಮೇಲ್ಪಂಕ್ತಿಯಲ್ಲಿ ದುಷ್ಟರನ್ನು ತೋಳ್ಬಲ ವಾಗ್ಬಲ-ವಾದಬಲಗಳಿಂದ ಮುಗಿಸಿ ಬಿಟ್ಟವರು.

ಹರಿದಾಸರು ಶಕ್ತರು ಹರಿ ಪ್ರತಿಜ್ಞೆಯನ್ನು ಅವನಿಂದಲೇ ಮುರಿಸಿದ ಭೀಷ್ಮ, ಊಳಿಗಕ್ಕೆ ಹಾಕಿದ ಧರ್ಮರಾಯ, ಬಂಡಿ ಹೊಡೆಸಿದ ಪಾರ್ಥ, ಬಾಗಿಲನ್ನು ಕಾಯಿಸಿದ ಬಲಿ ಇವರುಗಳೇ ಇದಕ್ಕೆ ಸಾಕ್ಷಿ.

ವೈಕುಂಠಕ್ಕೇ ನೇರ ನಡೆಯುವಂತಹವರು ಹರಿದಾಸರು. ಹಿಡಿ ಅವಲಕ್ಕಿಮಾತ್ರದಿಂದ ಸಕಲ ಸೌಭಾಗ್ಯ ಸೂರೆಗೊಳ್ಳಬಲ್ಲವರು. ರಾಜೌತಣ ಬಿಡಿಸಿ, ಹರಿಗೆ ಕುಡಿತೆ ಹಾಲನ್ನು ಕುಡಿಸಬಲ್ಲವರು. ಕುರೂಪಿಯಾದವರೂ ಹರಿಯನ್ನು ಕೂಡಬಲ್ಲವರು.

ಹರಿದಾಸರ ಸಂಗಕ್ಕೆ ಸರಿ ಮಿಗಿಲೆಲ್ಲಿಯೂ ಇಲ್ಲ. ಅರಿಷಡ್ವರ್ಗದ ಹಾವಳಿಯನ್ನು ತಪ್ಪಿಸಿ, ಅಹಂ ಮಮತೆ ಕಳೆದು, ಇಂದ್ರಿಯಗಳ ಸೆರೆ ಬಿಡಿಸಿ, ಹರಿಯ ಕರುಣಾರಸದಿಂದ ತಮ್ಮ ಸಹವಾಸದಲ್ಲಿರುವವರನ್ನು ತೋಯಿಸಿ, ಹರಿಸನ್ನಿಧಿ ಸೇರಿಸಬಲ್ಲವರು. ಮೂಢರಿಗೆ ಜ್ಞಾನವಿತ್ತು ನರಹರಿಯ ದರ್ಶನ ಮಾಡಿಸಿ, ತಾವು ಅನುಗ್ರಹಿಸಿದವರನ್ನು ಭವಾಬ್ಧಿಯಿಂದ ಹಿಡಿದೆತ್ತಿ ಶ್ರೀ ಕೃಷ್ಣನಲ್ಲಿ ಸೇರಿಸುವಂತಹವರು. ಅವರು ನರರಲ್ಲ-ಸುರರೊಳಗೂ ಅಧಿಕರು. ಅವರನ್ನು ನರರೆಂದವರಿಗೆ ರೌರವ ನರಕವೇ ಸಿದ್ಧ. ಶ್ರೀ ಹರಿಯೇ ಅವರಿಗಧೀನನಾಗಿ ಅವರ ಮನಸ್ಸಿನಲ್ಲಿ ಸೆರೆಸಿಕ್ಕಿರುವನೆಂದರೆ ಅದೆಷ್ಟು ಮಹಾಮಹಿಮರವರು !

ಯಾರ ದಾಕ್ಷಿಣ್ಯಕ್ಕೂ ಒಳಗಾಗದವರು ಹರಿದಾಸರು. ಸರಳರೂ, ಸುಶೀಲರೂ, ಸ್ನೇಹಪರರಾವರೂ. ಅವರು ವ್ಯವಹಾರ ವಿವೇಕ ಮರೆತವರಲ್ಲ. ಹನುಮಭಟರಾದ ಅವರು ದುಷ್ಟದರ್ಪ ಮೆಟ್ಟಿ ಶಾಸನ ಮಾಡಬಲ್ಲರು ನಿರ್ಬೀಜ ಪಾಪವೇನೆಂಬುದನ್ನು, ಪಾಪ-ಬೀಜ ಪುಣ್ಯವೇನೆಂದು ಅವರರಿತು ಪುಣ್ಯಾಚರಣೆ ಮಾಡುವವರು. ಶಿಕ್ಷಕರಾದ ರಾಜರನ್ನೇ ರಕ್ಷಿಸಬಲ್ಲವರು. ಎಂತಹ ದುಷ್ಪ್ರಯೋಗವೂ ಅವರೆದುರಿಗೆ ನಿಲ್ಲಲಾರದು. ಶಾಪಾನುಗ್ರಹ ಸಮರ್ಥರಾದ ಅವರು, ಅನುಗ್ರಹ ಮಾಡಿರುವ ಪ್ರಸಂಗಗಳೇ ಹೆಚ್ಚು. ಋಷಿ ಸದೃಶರಾದರೂ, ಹಲವು ಋಷಿಗಳಂತೆ ಶೀಘ್ರ ಕೋಪಿಗಳಾಗಿ ಶಾಪಕೊಡುವವರಲ್ಲ. ದೇವತಾ ಸ್ವಭಾವ ಮರೆಸಿರುವವರಾದರೂ ಹಲವು ದೇವತೆಗಳಂತಲ್ಲದೆ ಕಾಮ, ಕ್ರೋಧ, ಲೋಭ, ಮೋಹ ಬಿಟ್ಟವರು ದಿಟ್ಟರು, ಯುಕ್ತವಂತರು. ಸರಸಿಗಳು, ಹಾಸ್ಯಪ್ರವೃತ್ತಿಯವರು, ಸದಾ ಪ್ರಸನ್ನಚಿತ್ತರು. ಒಟ್ಟಿನಲ್ಲಿ ನೋಡಿದರೆ ಅವರು ಸಂಪೂರ್ಣ ಪರಿಪಕ್ವ ಮಾನವರು. ಸಂಸಾರದಲ್ಲಿದ್ದುಕೊಂಡೂ ಇಲ್ಲದಂತಿರುವ ಅವರಿಗೆ ಗೇರುಬೀಜ ಗೇರುಹಣ್ಣಿಗೆ ಅಂಟಿಕೊಂಡಂತಿರುವವರೆಂಬ ಉಪಮೆ ಬಹು ಚೆನ್ನಾಗಿ ಒಪ್ಪುತ್ತದೆ

ಹರಿದಾಸರು ಮಹಾಗುರುಭಕ್ತರು, ನೀತಗುರುಗಳ ಉಪದೇಶ, ಅನುಗ್ರಹ, ಅಂಕಿತ ಬಲಗಳಿಂದ, ಸುಸಾಧನೆ ನಡೆಸಿ, ತಮ್ಮ ಬಿಂಬರೂಪೀ ಹರಿ



ಯನ್ನು ಗುರ್ತಿಸಿಕೊಂಡು ಹರಿಯಪರೋಕ್ಷಗಳಿಸಿಕೊಂಡವರು. ಹರಿದಾಸರಲ್ಲಿಯೂ ತಾರತಮ್ಯವೆಂಬ ಮಹಾತತ್ತ್ವದ ಪ್ರಸಾರವಿದ್ದು ಗುಣ ಮಟ್ಟಗಳ ತಾರತಮ್ಯವಿದ್ದೇ ಇದೆ. ಹೀಗಾಗಿ ಹರಿದಾಸ ವರ್ಗದಲ್ಲಿ ದಾಸವರರಲ್ಲದೆ ಇತರ ವಿವಿಧ ಮಟ್ಟದ ಜ್ಞಾನ ಸಾಧನಗಳ ಸೋಪಾನಗಳಲ್ಲಿರುವ ಇತರ ಹರಿದಾಸರನ್ನೂ ಕಾಣಬಹುದು

ಪ್ರಸ್ತುತದಲ್ಲಿ ಹರಿದಾಸರೆಂದರೆ "ಕರ್ನಾಟಕದ ಹರಿದಾಸರೆ"ಂದೇ ಮನಸ್ಸಿನಲ್ಲಿ ಭಾವನೆ ಮೂಡುತ್ತದೆ. ಇದು ಸೂಕ್ಷ್ಮವಾದುದೇ. ಕರ್ನಾಟಕದಲ್ಲಿ ಹರಿದಾಸ ಪಂಥ ಬೆಳೆದು ಬೆಳಗಿದಂತೆ ಇತರ ಎಡೆಗಳಲ್ಲಿ ಬೆಳಗಿದುದು ಕಾಣಸಿಗದು.

ಕರ್ನಾಟಕದ ಹರಿದಾಸ ಶ್ರೇಷ್ಠರಾದವರಲ್ಲಿ ಯತಿಪುಂಗವರೂ ಸೇರಿರುವುದು ಅಪೂರ್ವವಾದ ಇಲ್ಲಿನ ವೈಶಿಷ್ಟ್ಯ. ಶ್ರೀನರಹರಿ ತೀರ್ಥರು, ಶ್ರೀ ಶ್ರೀಪಾದ ರಾಜರು, ಶ್ರೀ ವ್ಯಾಸರಾಜರು, ಶ್ರೀ ವಾದಿರಾಜರು, ಶ್ರೀ ರಾಘವೇಂದ್ರತೀರ್ಥರು, ಶ್ರೀ ವರದೇಂದ್ರ ತೀರ್ಥರು, ಶ್ರೀ ವ್ಯಾಸತತ್ತ್ವಜ್ಞರು, ಶ್ರೀ ಸಂಕರ್ಷಣವಡೆಯರು ಮತ್ತು ಇತ್ತೀಚಿನವರಾದ ಶ್ರೀ ವಿದ್ಯಾರತ್ನಾಕರ ತೀರ್ಥರು ಮತ್ತು ಶ್ರೀ ವಿದ್ಯಾಪ್ರಸನ್ನ ತೀರ್ಥರೂ ಖ್ಯಾತಿವೆತ್ತವರು. ಹರಿದಾಸರಲ್ಲಿ, ದಾಸರೆಂದೇ ಪ್ರಸಿದ್ಧರಾದವರಲ್ಲಿ ಅಪ್ರತಿಮರಾದ ಪುರಂದರದಾಸರು. ಜ್ಞಾನಿಶ್ರೇಷ್ಠ ವಿಜಯದಾಸರು, ಭಕ್ತವರ ಗೋಪಾಲದಾಸರು, ಖ್ಯಾತ ಹರಿಕಥಾಮೃತಸಾರ ವಕ್ತಾರರಾದ ಜಗನ್ನಾಥದಾಸರು 'ದಾಸ ಚತುಷ್ಟಯ'ರೆಂದು ಪ್ರಸಿದ್ಧರಾಗಿರುತ್ತಾರೆ. ಇತರ ಅಪರೋಕ್ಷಜ್ಞಾನ ಪಡೆದ ಮಹನೀಯರೆಂದರೆ ಮೋಹನದಾಸರು, ವೇಣುಗೋಪಾಲದಾಸರು, ಗುರುಗೋಪಾಲದಾಸರು, ವರದಗೋಪಾಲದಾಸರು, ತಂದೆ ಗೋಪಾಲದಾಸರು, ವ್ಯಾಸವಿಠಲಾಂಕಿತದಾಸರು, ಶ್ರೀದವಿಠಲಾಂಕಿತದಾಸರು, ಪ್ರಾಣೇಶದಾಸರು ಮತ್ತು ಗುರು ವಿಜಯದಾಸರು, ಹೆಳವನಕಟ್ಟೆ ಗಿರಿಯಮ್ಮ, ವೈರಾಗ್ಯಶಾಲಿ ತಿಮ್ಮಣ್ಣದಾಸರು, ಶ್ರೀಶ ವಿಠಲಾಂಕಿತರು, ಗುರುಶ್ರೀಶವಿಠಲಾಂಕಿತರು, ಸುರಪುರದ ಆನಂದದಾಸರು, ಜನಾರ್ದನ ವಿಠಲಾಂಕಿತರು, ಅಭಿನವ ಜನಾರ್ದನ ವಿಠಲಾಂಕಿತರು, ಭೀಮೇಶವಿಠಲಾಂಕಿತರು, ಶ್ರೀವತ್ಸಾಂಕಿತರು, ಗುರುಪ್ರಾಣೇಶ ವಿಠಲಾಂಕಿತರು, ಇತರ ಮುಖ್ಯ ಹರಿದಾಸರು. ಇವರ ನಂತರ ಇದೇ ಪೀಳಿಗೆಯು ಮುಂದುವರಿದು ಬೆಳೆದು ಇನ್ನೂ ಬೆಳೆಯುತ್ತಿದೆ.

ಹರಿದಾಸ ಪ್ರಪಂಚದಲ್ಲಿ ಜ್ಞಾನಿಗಳೂ, ಪುರಂದರದಾಸ, ವಾದಿರಾಜ ಯತಿಗಳ ಮಿತ್ರರೂ, ವ್ಯಾಸರಾಜರ ಕೃಪಾ ಪಾತ್ರರೂ ಆದ ಶ್ರೀ ಕನಕ ದಾಸರು ವಿಶಿಷ್ಟ ಸ್ಥಾನವನ್ನಲಂಕರಿಸಿರುತ್ತಾರೆ.

ಈ ಹರಿದಾಸರುಗಳೆಂದರೆ–ಜ್ಞಾನ–ಭಕ್ತಿ–ವೈರಾಗ್ಯ–ಸ್ನೇಹ–ಕರುಣೆ, — ಈ ದಿವ್ಯಧಾತು ಪಂಚಕದಿಂದ ನಿರ್ಮಿತವಾದ ದಿವ್ಯ ಸುಂದರ ಮೂರ್ತಿಗಳು, ಇವರಿಂದ ಜಗತ್ತಿಗಾಗಿರುವ ಉಪಕಾರವು ಅಷ್ಟಿಷ್ಟಲ್ಲ.

ಜ್ಞಾನ–ಭಕ್ತಿ ಬೋಧೆಗಳನ್ನೇ ಮುಖ್ಯ ಕಾರ್ಯವನ್ನಾಗಿಸಿಕೊಂಡ ಹರಿದಾಸರ ಬೋಧಾ ಕ್ರಮ ಸರಳ–ಸುಂದರ ಹಾಗೂ ಪರಿಣಾಮಕಾರಿಯಾಗಿರುವುದನ್ನು ಕಾಣಬಹುದು ಶಿಷ್ಯರ ಬರವನ್ನು ಕಾಯುತ್ತ ಕುಳಿತವರವರಲ್ಲ. ತಾವೇ ಸುಜೀವಿಗಳಿದ್ದಲ್ಲಿಗೆ ಹೋಗಿ ಮನೆ ಮನೆ ತಿರುಗಿ, ಸುಲಭವಾಗಿ ಅರ್ಥವಾಗುವ, ಅರ್ಥವು ಮನವನ್ನು ನೇರವಾಗಿ ತಾಗುವ, ಹಾಡಿನ ರೂಪದಿಂದ, ನರ್ತನ–ಭಾವ ಪ್ರದರ್ಶನಗಳಿಂದ ಅವರ ಕಣ್ಣುಗಳು ತುಂಬಿ ಬಂದು, ಮನ ಕರಗುವಂತಾಗಿ, ಮೈ ಪುಳಕಗೊಂಡು, ಬೋಧಾಮೃತ ಸವಿದು ನವ್ಯ–ದಿವ್ಯ ಅನುಭವ ಪಡೆಯುವಂತಾಗಿಸುವವರು. ಹರಿದಾಸರ ಇಂತಹ ಬೋಧೆಯು, ಆಕಸ್ಮಿಕವಾಗಿ ಕಿವಿಗೆ ತಾಗಿದರೂ ಸಹ ಸುಜನೋದ್ಧಾರವಾಗಿರುವ ನಿದರ್ಶನಗಳಿಗೆ ಕೊರತೆಯಿಲ್ಲ. ಮುಂದೆ ಶ್ರೀ ವಿಷ್ಣುತೀರ್ಥರೆಂದು ಖ್ಯಾತರಾಗಿ ಜಗ ಬೆಳಗಿದ ಯತಿವರರ ಸಂಸಾರ ಮೋಚನ–ಉದ್ಧಾರ ಈ ರೀತಿಯಿಂದ ಆದುದೆಂದು ಜಗತ್ತು ಅರಿತಿದೆ ಈ ರೀತಿ ಹರಿದಾಸರ ಬೋಧೆಗೆ–ಪಾಠಶಾಲೆ ಗುರುಕುಲಗಳ ವಿಶ್ವವಿದ್ಯಾಲಯಗಳ ಪರಿಮಿತಿಯಿಲ್ಲ. ಊರೂರುಗಳೇ ಕೇರಿ ಕೇರಿಗಳೇ–ಮನೆ ಮನೆಗಳೇ, ಅವರ ಬೋಧೆಯ ತಾಣಗಳು

ಹೀಗೆಂದರೆ, ಇದ್ದಲ್ಲಿಯೇ ಜ್ಞಾನ–ಭಕ್ತಿ ಬೋಧೆಯೊದಗಿಸಿ ಉದ್ಧಾರ ತರುವ ಕಾರ್ಯ ಕ್ರಮದಿಂದ, ಶ್ರೀ ಹರಿಯಿಂದ ಆಜ್ಞಪ್ತರಾದ ನಾರದರೇ ಆದ ಶ್ರೀ ಪುರಂದರದಾಸರೇ ಆಗಲೀ, ಭೃಗು ಋಷಿಗಳಾದ ಶ್ರೀ ವಿಜಯದಾಸರೇ ಆಗಲೀ, ತಮ್ಮ ಜ್ಞಾನ ಪ್ರಸಾರ ಕಾರ್ಯಕ್ರಮ

(24 ನೇ ಪುಟ ನೋಡಿ)

# ಆರ್ಜಿತ ತೆಪ್ಪ ಉತ್ಸವ

ಸಾಧಾರಣವಾಗಿ ವರುಷಕ್ಕೊಂದು ಬಾರಿ 3 ದಿನಗಳ ಪರ್ಯಂತ ನಡೆಯುವ ಪ್ಲವೋತ್ಸವವಲ್ಲದೆ, ಭಕ್ತಜನರ ಸೌಕರ್ಯಕ್ಕಾಗಿ ದೇವಸ್ಥಾನದವರಿಂದ ಏರ್ಪಡಿಸಲ್ಪಟ್ಟ ಆರ್ಜಿತೋತ್ಸವ, ಈ ಪ್ಲವೋತ್ಸವ.

ಪ್ರತಿ ಮಂಗಳವಾರದಲ್ಲ, ಆರ್ಜಿತಸೇವೆಗಳನಂತರ, ಮಲಯಪ್ಪಸ್ವಾಮಿಯವರನ್ನು ದೇವೇರಿಗಳನ್ನು ಅಲಂಕರಿಸಿ, ಮಂಗಳ ವಾದ್ಯನಾದ, ವೇದಪ್ರಬಂಧ ಪಠನಾದಿಗಳ ನಡುವೆ ಅವರನ್ನು ಅಲಂಕೃತವಾದ ತೆಪ್ಪದ ಮೇಲೆ ಕುಳ್ಳಿರಿಸಿ, ಸ್ವಾಮಿ ಪುಷ್ಕರಿಣಿಯಲ್ಲಿ 3 ಪರ್ಯಾಯ ವಿಹಾರಯಾತ್ರೆ ಮಾಡಿಸುತ್ತಾರೆ

ಈ ಮೂರು ಪ್ರದಕ್ಷಿಣೆಗಳ ಅನಂತರ ನಿವೇದನ, ಮಂಗಳ ನೀರಾಜನ ನಡೆದು ಸ್ವಾಮಿಯವರು ದೇವೇರಿಗಳು ವಿವಿಧ ಮರ್ಯಾದೆಗಳೊಡನೆ ಆಲಯ ಪ್ರವೇಶ ಮಾಡುತ್ತಾರೆ.

ರು. 1500 ಹಣ ಸಲ್ಲಿಸಿದ ಗೃಹಸ್ಥರು ಈ ಸೇವೆ ಮಾಡಿಸಿ, ಸ್ವಾಮಿಯವರ ಪುಷ್ಕರಿಣೀ ವಿಹಾರವನ್ನು ಮೆಟ್ಟಿಲ ಮೇಲಿದ್ದು ನೋಡಬಹುದು ಗೃಹಸ್ಥರಿಗೆ ವಸ್ತ್ರ ಬಹುಮಾನ, ಪ್ರಸಾದವಿನಿಯೋಗಗಳಲ್ಲದೆ, ಸ್ವಾಮಿಯವರ ಆಕೃತಿಯುಳ್ಳ ಬಂಗಾರದ ಪದಕ ಕೊಡಲ್ಪಡುತ್ತದೆ. ಅವರಿಗೆ ಸಂಬಂಧಿಸಿದ 10 ಜನರನ್ನು ದರ್ಶನಕ್ಕೆ ಬಿಡಲಾಗುತ್ತದೆ.

**ತಿರುಮಲೆ ತಿರುಪತಿ ದೇವಸ್ಥಾನ.**

# ವಿಗ್ರಹಾರಾಧನೆ (ಕಿರುಕಥೆ)

ಎಚ್. ಕೆ. ಅನಸೂಯ, ಎಂ. ಎ.,

" ಶುಕ್ಲಾಂ ಬರಧರಂ ವಿಷ್ಣುಂ
ಶಶಿವರ್ಣಂ ಚತುರ್ಭುಜಂ
ಪ್ರಸನ್ನವದನಂ ಧ್ಯಾಯೇತ್
ಸರ್ವ ವಿಘ್ನೋಪ ಶಾಂತಯೇ. "

ಈ ಶ್ಲೋಕ ಪೂಜೆಯ ಆರಂಭದಲ್ಲಿ ವಿಘ್ನೇಶ್ವರನಿಗೆ ಸಲ್ಲುವ ಪ್ರಥಮ ಪೂಜೆಯನ್ನು ನಿವೇದಿಸುತ್ತದೆ. ಯಾವುದೇ ಪೂಜೆಯಲ್ಲಾಗಲೀ ಮೊದಲು ಆ ಗಣಪತಿಯನ್ನು ಶಾಸ್ತ್ರೋಕ್ತವಾಗಿ ಮಂತ್ರ ಪೂರ್ವಕ ವಿಧಿಯಿಂದ ಈ ರೀತಿ ಅರ್ಚಿಸುವುದು ನಿಯಮ. ಪ್ರಥಮ ಪೂಜೆ ವಿನಾಯಕನಿಗೆ ಸಲ್ಲಿಸಿದ ನಂತರ ಮಿಕ್ಕದೇವರುಗಳಿಗೆ ಪೂಜೆ ಸಲ್ಲಿಸುವುದು ಪದ್ಧತಿ. ಈ ರೀತಿ ಎಲ್ಲಾ ದೇವರ ವಿಗ್ರಹಗಳಿಗೆ ಪೂಜೆಯನ್ನು ಸಲ್ಲಿಸುವುದು, ಅದರಲ್ಲೂ ಗಣಪತಿಗೇ ಏಕೆ ಪ್ರಥಮ ಪೂಜೆ ಎಂಬುದೊಂದು ವಿಚಾರ ಮಾಡಬೇಕಾದ ವಿಷಯ.

ವಿಗ್ರಹದ ಆರಾಧನೆ ನಮ್ಮಲ್ಲಿ ಅನಾದಿ ಕಾಲದಿಂದಲೂ ನಡೆದು ಬಂದಿರುವ ಪೂಜಾ ವಿಧಾನ. ಸರ್ವ ವಿಘ್ನ ನಿವಾರಕನೂ ಆದ ವಿಘ್ನೇಶ್ವರನಿಗೆ ಪ್ರಥಮ ಪೂಜೆಗೈದು ಅನಂತರ ಧೂಪದ, ದೀಪದ, ಫಲ ಪುಷ್ಪಗಳ ನೈವೇದ್ಯದೊಂದಿಗೆ ವಿಗ್ರಹ ಪೂಜೆಯನ್ನು ಭಕ್ತಿಯಿಂದ ನಡೆಸುವುದು ದೈವಪೂಜೆಯ ವೈವಿಧ್ಯ. ಪೂಜೆಯ ನಂತರ ದೇದೀಪ್ಯಮಾನವಾಗಿ ಬೆಳಗುವ ದೇವರ ವಿಗ್ರಹಗಳು ನಿಜಕ್ಕೂ ನಯನ ಮನೋಹರ. ಆದರೆ ಆ ವಿಗ್ರಹಗಳಲ್ಲಿ ದೈವತ್ವವನ್ನು ಗುರುತಿಸಿ ಅವುಗಳನ್ನು ಪೂಜಿಸುವ ವಿಧಾನ ಆರಂಭವಾದುದು ಹೇಗೆ? ಅದರ ಹಿನ್ನೆಲೆಯಲ್ಲಿ ಒಂದು ಕುತೂಹಲಕಾರಿಯಾದ ಕಥೆಯೇ ಅಡಗಿದೆ. ಆ ಕಥೆಯ ಆಳ, ವಿಸ್ತಾರ, ಹರಹುಗಳನ್ನು ವಿಚಾರಾತ್ಮಕವಾಗಿ ವಿವೇಚಿಸಿ, ಸೂಕ್ಷ್ಮವಾಗಿ ಅರಿತರೆ ವಿಗ್ರಹ ಪೂಜೆಯಲ್ಲಿರುವ ನಿಗೂಢತೆಯ ಅರ್ಥನ್ನು ತಿಳಿಯಬಹುದು.

ಪುರಾತನ ಕಾಲದಲ್ಲಿ ದಿನದಾಸನೆಂಬ ಓರ್ವ ಅರಸ ಶಿವನನ್ನು ಕುರಿತು ಸತತ ತಪಸ್ಸು ಮಾಡಿದ. ಆತನ ಭಕ್ತಿಗೆ. ಸತತ ತಪಸ್ಸಿಗೆ ಮೆಚ್ಚಿದ ಈಶ್ವರ ಪ್ರತ್ಯಕ್ಷನಾಗಿ, ನಿನಗೇನು ವರ ಬೇಕೆಂದು ಕೇಳಲು, ಸಂತೋಷಗೊಂಡ ದಿನದಾಸ,

"ದೇವಾ ನನ್ನ ರಾಜ್ಯದಲ್ಲಿ ಯಾವ ದೇವರೂ ಇರಬಾರದು ." ಎಂದು ವರವನ್ನು ಬೇಡಿದ.

ಸಂತಸದಿಂದಲೇ 'ತಥಾಸ್ತು' ಎಂದು ನುಡಿದ ಶಿವ ಅಂತರ್ಧಾನನಾದ.

ಶಿವನಿಂದ ವರಪಡೆದ ನಂತರ ರಾಜ್ಯದಲ್ಲಿ ಮೊದಲೆಲ್ಲಾ ಸುಲಲಿತವಾಗಿಯೇ ರಾಜ್ಯಭಾರ ನಡೆಯಿತು. ಜನರೆಲ್ಲಾ ದೇವರ ಪೂಜೆಯನ್ನು ನಿಲ್ಲಿಸಿದರು. ದೇವರೇ ಇಲ್ಲದಿದ್ದುದರಿಂದ ರಾಜನೂ ದೇವರ ಪೂಜೆಯನ್ನು ಮರೆತ.

ದೇವಾದಿ ದೇವತೆಗಳೆಲ್ಲಾ ಪೂಜಾವಿಹೀನರಾದರು. ಇದರಿಂದ ದೇವಾದಿದೇವತೆಗಳಿಗೆ ಯಜ್ಞಯಾಗಾದಿಗಳು ಇಲ್ಲದೆ ಹವಿಸ್ಸು ಇಲ್ಲದಂತಾಯಿತು. ಇದಕ್ಕೆ ಸೂಕ್ತ ಪರಿಹಾರವನ್ನು ಕಂಡು ಹಿಡಿಯಲೇಬೇಕೆಂದು ನಿರ್ಧರಿಸಿದ ದೇವಾದಿದೇವತೆಗಳು ವಿಷ್ಣುವಿನ ಸನ್ನಿಧಾನಕ್ಕೆ ತೆರಳಿದರು.

ದೇವಾದಿದೇವತೆಗಳನ್ನು ಆದರದಿಂದಲೇ ಬರಮಾಡಿಕೊಂಡ ವಿಷ್ಣು. ಅವರ ತೊಂದರೆಗಳೇನೆಂದು ವಿಚಾರಿಸಲು, "ದೇವಾ .ನಮಗೆಲ್ಲಾ ಈಗ ಪೂಜೆಯಿಲ್ಲದಿರುವುದರಿಂದ ಹವಿಸ್ಸು ಇಲ್ಲದಂತಾಗಿದೆ. ಇದಕ್ಕೆ ತಕ್ಕ ಪರಿಹಾರ ಕಂಡು ಹಿಡಿಯಲೇ ಬೇಕು .." ಎಂದರು.

ವಿಷ್ಣುವಿಗೂ ಸಹ ಏನೊಂದು ಪರಿಹಾರ ದೊರೆಯದೆ ಆಲೋಚಿಸುವಂತಾಯಿತು. ಕೊನೆಗೆ ವಿಷ್ಣು, "ಆ ವರ ನೀಡಿದ ಶಿವನನ್ನೇ ಇದಕ್ಕೆ ಪರಿಹಾರ ಕೇಳೋಣ ನಡೆಯಿರಿ" ಎಂದನು. ಎಲ್ಲರೂ ಒಂದುಗೂಡಿ ಕೈಲಾಸಕ್ಕೆ ಬಂದರು.

ಈಶ್ವರ ಆಸೀನನಾಗಿದ್ದಲ್ಲಿಗೆ ಬಂದು, "ದೇವಾ . ಆ ದಿನದಾಸನಿಗೆ ನೀನೇನೋ ವರ ಕೊಟ್ಟುಬಿಟ್ಟೆ. ಆದರೆ ಈಗ ನಮಗೆಲ್ಲಾ ಪೂಜೆಯೇ ಇಲ್ಲದೆ ಹವಿಸ್ಸೇ ಇಲ್ಲದಂತಾಗಿದೆ. ಇದಕ್ಕೆ ತಕ್ಕ ಪರಿಹಾರ ಸೂಚಿಸು ." ಎಂದು ತಮ್ಮ ಅಳಲನ್ನು ಶಿವನಲ್ಲಿ ತೋಡಿಕೊಂಡರು.

ವರ ನೀಡಿದ್ದ ಶಿವನಿಗೂ ಈಗೇನು ಮಾಡುವುದೆಂದು ತೋರದಾಯಿತು. ಮತ್ತೆ ಎಲ್ಲರೂ ದೇವರನ್ನು ಪೂಜಿಸುವಂತೆ ಮಾಡುವುದು ಹೇಗೆ ಎಂಬುದೇ ಒಂದು ಸಮಸ್ಯೆಯಾಯಿತು. ಈಶ್ವರನಿಗೂ ಇದಕ್ಕೆ ತಕ್ಕ ಪರಿಹಾರ ತೋಚದೆ ತೊಳಲಾಡುವಂತಾಯಿತು.

ಅಲ್ಲಿಯೇ ತಂದೆಯೊಂದಿಗೆ ಕುಳಿತಿದ್ದ ಗಣೇಶ ಮಾತ್ರ ಇದನ್ನು ಕಂಡು ನಸನಕ್ಕು;

"ತಂದೆಯೇ, ನೀನು ಅಪ್ಪಣೆ ಕೊಡಿಸಿದರೆ ನಾನೆಲ್ಲಾ ಸರಿ ಮಾಡುತ್ತೇನೆ. ಮೊದಲಿನಂತೆ ಭೂಲೋಕದ ಜನರಿಂದ ದೇವರ ಪೂಜೆ ಮಾಡಿಸುತ್ತೇನೆ" ಎಂದನು.

ಸರ್ವದೇವರುಗಳೂ ಗಣಪತಿಯನ್ನೇ ಚಕಿತರಾಗಿ ನೋಡತೊಡಗಿದರು. ಮಗನ ಕೆಲಸದಲ್ಲಿ ಭರವಸೆಯುಳ್ಳ ಈಶ್ವರ, ಮಗನಿಗೆ ಅಪ್ಪಣೆ ನೀಡಿದ.

ಗಣಪತಿಯ ಮಾಯೆಯಿಂದ ದಿನದಾಸನ ರಾಜ್ಯದಲ್ಲಿ ಘೋರಕ್ಷಾಮ ಉಂಟಾಯಿತು. ಜನರೆಲ್ಲಾ ಅನ್ನ ನೀರನ್ನು ಕಾಣದೆ ಕಂಗೆಡತೊಡಗಿದರು. ಆಹಾರ ಪದಾರ್ಥಗಳು ದೊರೆಯುವುದೇ ದುಸ್ತರವಾಯಿತು. ರಾಜನಂತೂ ಜನರಿಗೆ ಆಹಾರ ಸೌಕರ್ಯಗಳನ್ನು ಒದಗಿಸಲಾರದೆ ತೀರಾ ಕಂಗಲಾದ.

ಅರಸನಿಗೆ ಅದೇ ಒಂದು ಯೋಜನೆಯಾಯಿತು. ಅರಮನೆಯ ಸುಪ್ರಸಿದ್ಧ ಜ್ಯೋತಿಷಿಗಳಲ್ಲೆಲ್ಲಾ ಶಾಸ್ತ್ರ ಕೇಳಿದ್ದಾ

ಯಿತು. ಆದರೂ ಸೂಕ್ತ ಪರಿಹಾರ ದೊರೆಯಲಿಲ್ಲ.

ಅಷ್ಟರಲ್ಲಿ ಊರ ಹೊರಗಿನ ಬಯಲಿನಲ್ಲಿ ಯಾರೋ ಸನ್ಯಾಸಿಯೊಬ್ಬ ಚೆನ್ನಾಗಿ ಶಾಸ್ತ್ರ ಹೇಳುತ್ತಾನೆನ್ನುವ ವರ್ತಮಾನ ಅರಸನ ಕಿವಿಗೆ ತಲುಪಿತು. ಕೂಡಲೇ ಆ ಸನ್ಯಾಸಿಯನ್ನು ಅರಮನೆಗೆ ಕರೆತರಬೇಕೆಂದು ಅಪ್ಪಣೆ ಕೊಡಿಸಿದ. ಸೊಂಡಿಲನ್ನು ಮರೆಮಾಡಿಕೊಂಡು ಸನ್ಯಾಸಿಯ ವೇಷದಲ್ಲಿದ್ದ ಗಣಪತಿಯನ್ನು ರಾಜಭಟರು ಅರಮನೆಗೆ ಕರೆತಂದರು.

ಸನ್ಯಾಸಿಯನ್ನು ಸಕಲ ಮರ್ಯಾದೆಯೊಂದಿಗೆ ಗೌರವಿಸಿದ ಅರಸ, ತನ್ನ ರಾಜ್ಯದಲ್ಲಿ ಉಂಟಾಗಿರುವ ಕ್ಷಾಮನಿವಾರಣೆಗೆ ಸೂಕ್ತ ಪರಿಹಾರವನ್ನು ಸೂಚಿಸಬೇಕೆಂದು ಬಿನ್ನವಿಸಿಕೊಂಡ

ಕೂಡಲೇ ಆ ಸನ್ಯಾಸಿ,

"ಅಯ್ಯೋ. ಇದಕ್ಕೇಕೆ ಬೇಜಾರುಮಾಡಿಕೊಂಡು ವ್ಯಸನ ಪಡಬೇಕು? ಎಲ್ಲಾ ದೇವರಿಗೂ ಪೂಜೆ ಮಾಡಿ ಹವನ ಹೋಮ ಮಾಡಿದರೆ ಕ್ಷಾಮನಿವಾರಣೆಯಾಗುತ್ತೆ'' ಎಂದನು.

ಆಗ ರಾಜ, "ಅಯ್ಯೋ ಮಹಾಸ್ವಾಮಿ, ಏನು ಮಾತು ಅಂತ ಹೇಳಿದಿರಿ? ನನ್ನ ರಾಜ್ಯದಲ್ಲಿ ಯಾರೂ ದೇವರ ಪೂಜೆ ಮಾಡೋಲ್ಲ. ನಾನು ಮಾಡೋಲ್ಲ ಅಂತ ಈಶ್ವರನಿಂದ ವರ ಪಡೆದಿದ್ದೇನೆ'' ಎಂದು ಹೇಳಿ ಚಿಂತಿಸತೊಡಗಿದ.

ಆಗ ಸನ್ಯಾಸಿ ವೇಷದ ಗಣಪತಿ, "ಅದಕ್ಕೆಗೆ ಚಿಂತಿಸಬೇಕು? ಇದು ಬಹು ಸುಲಭ. ನೀವೇನು ದೇವರುಗಳನ್ನು ಮತ್ತೆ ಕರೆಸಬೇಕಾಗಿಲ್ಲ. ಎಲ್ಲಾ ದೇವರುಗಳ ಪ್ರತಿಮೂರ್ತಿ ಮಾಡಿಸಿ, ಪೂಜೆ ಮಾಡಿದರಾಯಿತು'' ಎಂದ.

ಅದರಂತೆ ರಾಜನು ತನ್ನ ರಾಜ್ಯದಲ್ಲಿರುವ ಶಿಲ್ಪಿಗಳಿಂದ ಎಲ್ಲಾ ದೇವರ ವಿಗ್ರಹಗಳನ್ನು ಕೆತ್ತಿಸಿದ.

"ಇಂದ್ರಾಯ ಸ್ವಾಹಾ .., ವರುಣಾಯ ಸ್ವಾಹಾ..., ಎಂದು ಮಂತ್ರವನ್ನು ಉಚ್ಚರಿಸಿದಾಗ ಆಯಾ ದೇವರುಗಳು ತಮ್ಮ ಹೆಸರನ್ನಿಟ್ಟಿದ್ದ ವಿಗ್ರಹದೊಳಗೆ ಬಂದು ಸೇರಿಕೊಂಡರು. ಪೂಜೆ ಸಾಂಗವಾಗಿ ನೆರವೇರಿ ದೇಶದಲ್ಲಿ ಸುಭಿಕ್ಷ, ಸೌಖ್ಯ ಉಂಟಾಯಿತು.

ಗಣಪತಿಯ ಚಾಣಾಕ್ಷತೆಯನ್ನು ಮೆಚ್ಚಿದ ಶಿವ, "ಇನ್ನು ಮುಂದೆ ಯಾವಾಗಲೂ ಪ್ರಥಮ ಪೂಜೆ ನಿನಗೇ ಸಲ್ಲಲಿ'' ಎಂದು ಮಗನಿಗೆ ಆಶೀರ್ವದಿಸಿದ. ಅಂದಿನಿಂದ ಇಂದಿನವರೆಗೂ ಗಣಪತಿಗೆ ಪ್ರಥಮ ಪೂಜೆ ಸಲ್ಲುತ್ತಲೇ ಬಂದಿದೆ. "ಮೊದಲೊಂದಿಪೆನು ನಿನಗೆ ಗಣನಾಥ'' ಎನ್ನುವ ಭಕ್ತರ ಆ ನುಡಿಮುತ್ತು ಅದೆಷ್ಟು ಅರ್ಥಪೂರ್ಣವಲ್ಲವೆ?

ಈ ರೀತಿ ವಿಗ್ರಹದಲ್ಲಿ ದೇವರರೂಪವನ್ನು ಕಂಡು ಆರಾಧಿಸಿ, ಉಪಾಸಿಸುವ ಪೂಜಾ ವಿಧಾನ ಉಗಮವಾಯಿತು. ಅಂದು ಆರಂಭವಾದ ಈ ವಿಗ್ರಹಪೂಜೆ ಇಂದಿಗೂ ನಡೆಯುತ್ತಲೇ ಬಂದಿದೆ. ವಿವಿಧ ವಿಗ್ರಹಗಳಲ್ಲಿ ವಿಭಿನ್ನ ಜಾತಿ ಮತದವರೂ ತಮ್ಮ ದೇವತೆಗಳನ್ನು ಕಾಣುತ್ತಾರೆ. ವಿಗ್ರಹಗಳು ಬೇರೆ ಬೇರೆಯಾದರೂ ಎಲ್ಲರೂ ಅದರಲ್ಲಿ ಕಾಣುವುದು ಆ ಭಗವಂತನ ದಿವ್ಯ ಸ್ವರೂಪವನ್ನೇ ಎನ್ನುವುದು ನಿಸ್ಸಂಶಯ. ಈ ರೀತಿ 'ವೈವಿಧ್ಯತೆಯಲ್ಲಿ ಏಕತೆ'ಯನ್ನು ನಿರೂಪಿಸುವ ವಿಗ್ರಹಪೂಜೆ ನಿಜಕ್ಕೂ ವೈಶಿಷ್ಟ್ಯಪೂರ್ಣವೆನ್ನುವುದರಲ್ಲಿ ಉತ್ಪ್ರೇಕ್ಷೆಯಿಲ್ಲ.





# ಗೃಹಲಕ್ಷ್ಮಿ



### ಕುವೆಂಪು ಚಿತ್ರಿಸಿದ

## 'ಮನೆ ಮನೆಯ ತಪಸ್ವಿನಿ'

**ಕೆ. ಎಂ. ಅಚ್ಯುತಕುಮಾರ ಎಂ.ಎ.,**

ಕನ್ನಡ ಸಾಹಿತ್ಯದ ಸರ್ವಪ್ರಾಕಾರಗಳಲ್ಲಿ ಸಮಾನವಾದ ಸಾಧನೆ, ಸಿದಿಯನ್ನು ಸಂಪಾದಿಸಿರುವ ಏಕಮೇವಾದ್ವಿತೀಯ ಸಾಹಿತಿ ರಸಿಋಷಿ ಕುವೆಂಪುರವರು 'ನಭೂತೋ ನ ಭವಿಷ್ಯತಿ' ಎನ್ನುವ ಕವಿಗಳ ಸಾಲಿನಲ್ಲಿ ಮೊದಲಿಗರಾಗಿದ್ದಾರೆ. ಪ್ರಸ್ತುತ 'ಮನೆ ಮನೆಯ ತಪಸ್ವಿನಿಗೆ' ಎನ್ನುವ ಕವನವನ್ನು ಪರಿಶೀಲನೆಗಾಗಿ ಅವರ ಕಾವ್ಯರಾಶಿಯಿಂದಲೇ ಆಯ್ದುಕೊಳ್ಳಲಾಗಿದೆ. ಪ್ರಸ್ತುತ ಕವನದಲ್ಲಿ ಕವಿಗಳು ಭಾರತದೇಶದ ಸ್ತ್ರೀಯರ ಆದರ್ಶ ಹಿರಿಮೆಗಳನ್ನು ಹಿಡಿದೆತ್ತಿ ಹಾಡಿಹೊಗಳಿರುವುದೇ ಅಲ್ಲದೆ ಅವಳ ತ್ಯಾಗಮಯ ಗೃಹಿಣೀ ಜೀವನವನ್ನು ಚಿತ್ರಿಸಿರುತ್ತಾರೆ. ಕವಿಗಳು ಭಾರತದೇಶದಲ್ಲಿ ಮನೆಮನೆಯಲ್ಲೂ ತಪಸ್ವಿನಿಯರನ್ನು ಕಂಡಿರುವುದನ್ನು ಈ ಕವನದಲ್ಲಿ ಕಾಣಬಹುದು. ಕವಿಯ ದಿವ್ಯದೃಷ್ಟಿಗೆ ಪ್ರತಿಯೊಬ್ಬ ಗೃಹಿಣಿಯೂ ಒಬ್ಬ ತಪಸ್ವಿನಿಯಾಗಿ ಕಂಡಿದ್ದಾಳೆ. ಇದು ಕೇವಲ ಕವಿ ಕಲ್ಪನೆಯಾಗಿಲ್ಲ. ಇದು ಕವಿ ಪ್ರತಿಭೆಯ ಅಂತಃಚಕ್ಷು ಕಂಡುಕೊಂಡ ನಿತ್ಯಸತ್ಯವಾಗಿದೆ.

ಸಾವಿತ್ರಿ, ದಮಯಂತಿ, ಚಂದ್ರಮತಿ, ಊರ್ಮಿಳೆ, ಶಕುಂತಳೆ, ಗಿರಿಜೆ, ವಾಸವದತ್ತೆ ಮೊದಲಾದವರು ಕಾವ್ಯಪ್ರಪಂಚದಲ್ಲಿ ಮಹಾ ತಪಸ್ವಿನಿಯರಾಗಿ ಅಮರರಾಗಿ ಆದರ್ಶವಾಗಿದ್ದಾರೆ. ಸೀತೆಯಲ್ಲಿ ಕಂಡುಬರುವ ಪಾತಿವ್ರತ್ಯ, ಪಾವಿತ್ರ್ಯ, ಸವಿನಯ, ಸಚ್ಚಾರಿತ್ರ್ಯ, ಆತ್ಮವಿಶ್ವಾಸ, ಧೃತಿ, ದೃಢತೆಗಳೇ ಅವಳ ಜೀವನದ ತಪಸ್ಸಾಗಿತ್ತು. ಇಂತಹ ತಪಸ್ವಿನಿಯರನ್ನು ಕಾಳಿದಾಸ, ಬಾಣ, ಭವಭೂತಿ ಮೊದಲಾದವರ ಕಾವ್ಯಗಳಲ್ಲಿ ಕಾಣಬಹುದು. ಆದರೆ ಆ ತಪಸ್ವಿನಿಯರೆಲ್ಲಾ ಇರುವುದು ಆಲೋಕದಲ್ಲಿ. ಅಂತಹ ತಪಸ್ವಿನಿಯರು ಆ ಲೋಕದಲ್ಲೇ ಅಲ್ಲ, ಈ ಮೃಣ್ಮಯಲೋಕದಲ್ಲೂ ಇರುವುದನ್ನು ಕವಿ ಕಂಡು ಈ ಕವನದಲ್ಲಿ ಚಿತ್ರಿಸಿದ್ದಾರೆ.

ಮನೆ ಮನೆಯಲ್ಲಿ ನೀನಾಗಿಹೆ ಗೃಹಶ್ರೀ;  
ಹೆಸರಿಲ್ಲದ ಹೆಸರು ನಿನಗೆ ಗೃಹಸ್ತ್ರೀ !

ಹೇ ದಿವ್ಯ ಸಾಮಾನ್ಯೆ  
ಹೇ ಭವ್ಯ ದೇವಮಾನ್ಯೆ  
ಅನ್ನಪೂರ್ಣೆ, ಅಹಂಶೂನ್ಯೆ  
ಚಿರಂತನ ಅಕೀರ್ತಿಕನ್ಯೆ  
ನಮೋ ನಿನಗೆ ನಿತ್ಯಧನ್ಯೆ!

ಹೀಗೆ ಕವನ ಪ್ರಾರಂಭವಾಗುತ್ತದೆ. ಕವಿ ಕವನದ ಆದಿಯಲ್ಲೇ 'ನಮೋ ನಿನಗೆ ನಿತ್ಯಧನ್ಯೆ!' ಎಂದು 'ಮನೆ ಮನೆಯ ತಪಸ್ವಿನಿಗೆ' ನಮ್ರತೆಯಿಂದ ತಲೆಬಾಗಿ ನಮಸ್ಕರಿಸುತ್ತಾರೆ. ಅವಳು ಮನೆ ಮನೆಯ ಯಃಕಶ್ಚಿತ್ ಯಾರೋ ಸಾಮಾನ್ಯ ಸ್ತ್ರೀ ಅಲ್ಲ; ಸಾಕ್ಷಾತ್ ಗೃಹಲಕ್ಷ್ಮಿಯಾಗಿದ್ದಾಳೆ. ಅವಳು ಗೃಹಲಕ್ಷ್ಮಿಯಾದರೂ ಅವಳಿಗೆ ಯಾವ ಹೆಸರೂ ಇಲ್ಲ. ಎಂದೇ ಅವಳು 'ಹೆಸರಿಲ್ಲದ ಹೆಸರಿ'ನ ಗೃಹಲಕ್ಷ್ಮಿಯಾಗಿದ್ದಾಳೆ. ಇದು ಸತ್ಯಸ್ಯ ಸತ್ಯವಾಗಿದೆ. ಏಕೆಂದರೆ ಯಾರೂ ಅವಳನ್ನು ಹೆಸರಿಟ್ಟು ಕರೆಯುವುದಿಲ್ಲ. ಹೆಂಡತಿಯನ್ನು ಗಂಡನಾದವನು 'ಇವಳೇ' ಎಂದೇ ಸಂಬೋಧಿಸುತ್ತಾನೆ. ಅನ್ಯರೂ ಅವಳನ್ನು ಇಂತಹವನ ಹೆಂಡತಿ ಎನ್ನುತ್ತಾರೆ. ಇನ್ನು ಅವಳ ಹೆಸರನ್ನು ಬರೆಯುವಾಗಲೂ ಅವಳಿಗೆ ಹೆಸರಿಲ್ಲ. ಕಾರಣ ಶ್ರೀ. ಶ್ರೀಮತಿ ಎಂದು ಬರೆದು ಗಂಡನ ಹೆಸರನ್ನು ಹಾಕಿಬಿಡುತ್ತಾರೆ. ಅಂತೂ ಅವಳಿಗೆ ಸ್ವಂತ ಅಸ್ತಿತ್ವವಿಲ್ಲವೆನ್ನುವ ಹಾಗಾಗಿದೆ. ಅವಳು ಮಕ್ಕಳು ಮತ್ತು ಕುಟುಂಬದಲ್ಲಿ ಹಿತವನ್ನು ಕಂಡುಕೊಂಡು ಪತಿಯಲ್ಲಿ ಲೀನವಾಗಿ ತನ್ನತನವನ್ನು ಸೊನ್ನೆಯಾಗಿಸಿಕೊಂಡಿದ್ದಾಳೆ. ಸೀತೆಯಂತೂ ರಾಮನಲ್ಲಿ "ತನ್ನ ರಮಣನಾ ನಂದಕೆ ತನ್ನೆಲ್ಲಮಂ ನಲಿದು ನೈವೇದ್ಯಂ ನೀಡಿ ತನ್ನತನವನ್ನೆ ಸೊನ್ನೆ ಮಾಡಿದಳು". ರಾಮ ಲಕ್ಷ್ಮಣರು ಅರಣ್ಯದಿಂದ ಅಯೋಧ್ಯೆಗೆ ಮರಳಿ ಬಂದಾಗ ಊರ್ಮಿಳೆ "..... ... ತನ್ನತಾನ್ಮ ಇಲ್ಲಗೈವುದೆ ಎಲ್ಲ ಸಾಧನಕೆ ಗುರಿ ಮೇಣ್ ತಪಕೆ" ಎಂದಳು ತನ್ನತನವನ್ನು ಇಲ್ಲಗೈದವರು ಗರತಿಯರು ಅವಳು ಅರ್ಧಾಂಗಿ, ಸಹಧರ್ಮಿಣಿ ಅಲ್ಲವೆ? ಅವಳು ಸಾಮಾನ್ಯಳಾದರೂ 'ದಿವ್ಯ ಸಾಮಾನ್ಯೆ, ಭವ್ಯದೇವಮಾನ್ಯೆ' ಆಗಿದ್ದಾಳೆ. ಅಷ್ಟೇ ಅಲ್ಲದೆ ಬಿಂಕ ಬಿನ್ನಾಣಗಳ ಸೋಂಕಿಲ್ಲದೆ, ಕೀರ್ತಿಶನಿಯ ಕಾಟವಾಗಲಿ, ಹಂಬಲವಾಗಲಿ ಇಲ್ಲದೆ ಪತಿಯ ಸಾಧನೆಯಲ್ಲಿ ಸಹಭಾಗಿಯಾಗಿ, ಮಕ್ಕಳ ಮಮತೆಯ ಮಾತೆಯಾಗಿ, ಸದಾ ನಗುಮುಖದಿಂದ ಮನೆಯ ಕೆಲಸ ಕಾರ್ಯಗಳನ್ನು ನಿರ್ವಹಿಸುವವಳಾಗಿದ್ದಾಳೆ. ಈ ಎಲ್ಲಾ ಕಾರಣಗಳಿಂದ ಕವಿಗೆ ಅವಳು ಪೂಜ್ಯಳಾಗಿದ್ದಾಳೆ.

ರಾಜಕೀಯರಂಗ ಸ್ತ್ರೀಗೆ ಹೊರತು. ಮನೆವಾರ್ತೆ ಅವಳ ಆಧ್ಯಾತ್ಮಿಕ ಸಿರಿಸಂಪತ್ತು. ಇದನ್ನೇ

ಭದ್ರತಾ ಸಮಿತಿಯಲ್ಲಿ  
ವಿಜಯಲಕ್ಷ್ಮಿ ವಾಗ್ಮಿತೆ  
ಆಧ್ಯಾತ್ಮಿಕ ಸಂಪತ್ತಿನ  
ನಿನ್ನ ಭೂಮದಿದಿರಿನಲ್ಲಿ  
ರಾಜಕೀಯದಲ್ಪತೇ ।

ಎಂದಿದ್ದಾರೆ. ಇಲ್ಲಿ ಕವಿಗಳು ಸ್ತ್ರೀಗೆ ರಾಜಕೀಯ ಕ್ಷೇತ್ರ ಅಲ್ಲ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಅನೇಕ ಭಾರತೀಯ ಮಹಿಳೆಯರು ರಾಜಕಾರಿಣಿಗಳಾಗಿ ಆಡಳಿತವನ್ನು ನಡೆಸಿರುವ ಉದಾಹರಣೆಗಳೂ ಉಂಟು. ಅನೇಕ ಸ್ತ್ರೀಯರು ಮಂತ್ರಿಗಳಾಗಿ ಕಾರ್ಯನಿರ್ವಹಿಸಿ ಯಶಸ್ವಿಯಾಗಿರುವರು. ಭಾರತದಲ್ಲೂ ಪ್ರಧಾನಮಂತ್ರಿ, ಸಚಿವರು, ರಾಜ್ಯಪಾಲರು ಹುದ್ದೆಗಳಲ್ಲಿ ಸ್ತ್ರೀಯರು ಯಶಸ್ವಿಯಾಗಿರುವುದನ್ನು ನೋಡಬಹುದು ಆಧ್ಯಾತ್ಮಿಕ ದೃಷ್ಟಿಯಿಂದ ಪರತತ್ತ್ವವನ್ನು ಬಲ್ಲ ಪಂಡಿತೆಯರಾಗಿ ಅನೇಕ ಉತ್ಕೃಷ್ಟ ಕಾವ್ಯಗಳನ್ನು ರಚಿಸಿ ಕೈವಲ್ಯವನ್ನು ಪಡೆದು ಭಕ್ತಿಮಾರ್ಗದರ್ಶಕರಾದವರು ಭಕ್ತ ಮೀರಾ, ಗೋದಾದೇವಿ, ಅಕ್ಕಮಹಾದೇವಿ ಮೊದಲಾದವರನ್ನು ಕಾಣಬಹುದು. ಇಷ್ಟಾದರೂ ಗರತಿಗೆ ರಾಜಕೀಯರಂಗ ಸಲ್ಲದು ಎನ್ನುವುದು ಕವಿಯ ಭಾವ, ನಿಲುವು. ಮನೆಮನೆಯ ತಪಸ್ವಿನಿ ಎಂದು ಗರತಿಯನ್ನು ಕರೆದ ಕವಿ ಅವಳ ತಪಸ್ಸು ಎಂಥಹುದು ಎಂಬುದನ್ನು;

ಅಡುಗೆ ಮನೆಯೆ ಪರ್ಣಶಾಲೆ
ಒಲೆಯ ಅಗ್ನಿ ಮುಖಜ್ವಾಲೆ
ಬಿಡುವಿಲ್ಲದ ಕಟುತಪಸ್ಯೆ
ಹುಣ್ಣಿಮೆಯೂ ಅಮಾವಾಸ್ಯೆ
ಆದರೂ ಅದೀನಾಸ್ಯೆ

—ಹೀಗೆ ಚಿತ್ರಿಸುತ್ತಾರೆ. ಇದು ಅವಳು ನಡೆಸುವ ದಿನದಿನದ ತಪಸ್ಸಿನ ಚಿತ್ರ ಸ್ತ್ರೀಯ ಕಾರ್ಯರಂಗ, ಕರ್ತವ್ಯ ಕ್ಷೇತ್ರಗಳೇ ಬೇರೆ, ಪುರುಷನದೇ ಬೇರೆ. ಅವಳಗೆ ಮನೆಯೇ ಕಾರ್ಯವಲಯ; ಎಂದೇ ಅವಳಿಗೆ ಅಡುಗೆಮನೆ ಪರ್ಣಶಾಲೆಯಾಗಿದೆ. ಒಲೆಯ ಅಗ್ನಿಯೇ ಮುಖಜ್ವಾಲೆ (ಯಜ್ಞಕುಂಡದ) ಯಾಗಿದೆ. ಇದು ಅವಳು ಬೆಳಗಿನಿಂದ ಬೈಗಿನತನಕ ನಡೆಸುವ ಬಾಹ್ಯತಪಸ್ಸು. ಬಾಹ್ಯತಪಸ್ಸಿನೊಂದಿಗೆ ಅಂತರಂಗದ ತಪಸ್ಸನ್ನೂ ಅವಳು ನಡಸಿದೇ ಬಿಟ್ಟಿಲ್ಲ. ದೈನಂದಿನ ಕೆಲಸಗಳ ಹಿಂದೆ ಸಂಸಾರದ ಸುಖ–ದುಃಖಗಳನ್ನು ಅನೇಕ ಸಮಸ್ಯೆಗಳನ್ನು ಸಹನೆಯಿಂದ ಸಹಿಸುವುದು ಅವಳ ಅಂತರಂಗದ ತಪಸ್ಸು, ಬಾಳು ದಾರುಣವಾದರೂ, ನೊಂದು ಬೆಂದು ಕಣ್ಣೀರಿನಲ್ಲಿ ಕೈತೊಳೆಯುತ್ತಿದ್ದರೂ ಬೆಳಗ್ಗಿನಿಂದ ರಾತ್ರಿ ಮಲಗುವವರೆಗೂ ಉಸಿರಾಡಲೂ ಸಹಾ ಸಮಯ ಸಿಗದಿದ್ದರೂ, ಗರತಿ ಮನೆಯಲ್ಲಿದ್ದು ಕರ್ತವ್ಯನಿಷ್ಠೆಯಿಂದ ಒಲಿದು ನಲಿದು ಮನೆಯನ್ನು ನಂದನವನವನ್ನಾಗಿ ಮಾಡಬಲ್ಲಳು. ಸಂಸಾರವನ್ನು ಬೆಳಗಬಲ್ಲಳು. ಸ್ತ್ರೀ ಕುಟುಂಬ ಜೀವನದ ಮೂಲಾಧಾರ. ಅವಳೇ ಸುಖಜೀವನದ ಮೂಲಸ್ಥಾನ. ಅವಳಿಂದ ಒಂದು ವಂಶ ಉದ್ಧಾರವಾಗಬಲ್ಲದು. ತೊಂದರೆಗಳಾಗಲಿ, ಅನರ್ಥಗಳಾಗಲಿ ಅವಳಿಂದ ನಿವಾರಿಸಲು ಸಾಧ್ಯವಾಗಿರುವುದು. ಇಷ್ಟೆಲ್ಲಾ ನಡೆಸಬೇಕಾದವಳಿಗೆ ಬಿಡುವು ಎಲ್ಲಿ? ಅದೇ ಗಂಡಸಿಗೆ ಮನೆ ಸಮಸ್ಯೆಗಳನ್ನು ಮರೆಯಲು ಸಾಧ್ಯವಿದೆ. ಹೊರಗೆ ದುಡಿಯುವ ಗಂಡಸು ನಾನಾ ರೀತಿಯ ಜನಗಳೊಂದಿಗೆ ಬೆರತು ಇದನ್ನು ಮರೆಯಬಹುದು. ಆದರೆ ಅಷ್ಟಾಗಿ ಮನೆಯಂಗಳ ದಾಟಿ ಹೆಜ್ಜೆ ಇಡದ ಹೆಣ್ಣುಜೀವ ಮನೆಯೊಳಗಿದ್ದು ಕೊಂಡೇ ಅವುಗಳನ್ನು ಮರೆಯಬೇಕಾಗಿರುವುದು ಅನಿವಾರ್ಯವಾಗಿದೆ. ಇದರಿಂದ ಅವಳಿಗೆ ಮಾನಸಿಕ ಒತ್ತಡ, ಆಯಾಸ, ಕೂಡಾ. ಎಂದೇ ಅವುಗಳಿಂದ ಅವಳಿಗೆ ಎಂದಿಗೂ ಬಿಡುಗಡೆ ಇಲ್ಲ. ಇಷ್ಟೆಲ್ಲ ಕಷ್ಟಗಳಿದ್ದರೂ ಅವಳು ತನ್ನ ಸೇವೆ ಸಹಕಾರಗಳಿಂದ ಸಂಸಾರವನ್ನು ಸಾಗಿಸುತ್ತಾಳೆ ಮನಸ್ಸಿನಲ್ಲಿರುವ ಚಿಂತೆಯನ್ನು ತೋರಿಸದೆ ಮೇಲೆ ನಗುನಗುತ್ತ 'ಅದೀನಾಸ್ಯೆ' ಯಾಗಿರುತ್ತಾಳೆ. ಸಮಾಜದ ಒಂದು ಘಟಕವಾಗಿರುವ ಕುಟುಂಬದ ಸುಖ–ಶಾಂತಿಗೆ ಗೃಹಿಣಿ ಗೃಹತಪಸ್ವಿನಿಯಾಗ ಬೇಕಾಗಿರುವುದು ಅನಿವಾರ್ಯ, ಅತ್ಯಂತ ಅಗತ್ಯ, ಎನ್ನುವುದನ್ನು ಯಾವ ಹೆಣ್ಣೂ ಮರೆಯಬಾರದು.

ಬೆಂಕಿ, ಹೊಗೆ; ಹೊಗೆ, ಬೆಂಕಿ!
ಮಸಿ, ಮುಸುರೆ; ಮುಸುರೆ, ಮಸಿ

ಇದು ಸ್ತ್ರೀಯ ದೈನಂದಿನದ ಲಲಾಟಲಿಪಿಯಾಗಿದೆ. ಒಲೆಯ ಹೊರಗೆ ಹೊಗೆ, ಬೆಂಕಿ, ಒಮ್ಮೊಮ್ಮೆ ಅವಳ ಮನಸ್ಸಿನ ಒಳಗೂ ಹೊಗೆ ಬೆಂಕಿ ಕಾಣಿಸಿಕೊಂಡು ಸುಡುತ್ತದೆ. ಆ ಹೊಗೆ ಬೆಂಕಿಗಳಿಗೆ ಹೆದರದೆ ಅದರ ಮಧ್ಯದಲ್ಲಿಯೇ ಬೇಯುತ್ತಾ ತಪಸ್ಸನ್ನು ಮಾಡುತ್ತಾಳೆ ಸಂಸಾರವನ್ನು ತ್ಯಜಿಸಿ, ಸಂನ್ಯಾಸಿಯಾಗಿ ಕಾಡು ಮೇಡುಗಳನ್ನು ಸೇರಿ ತಪಸ್ಸು ಮಾಡುವ ಅನೇಕರನ್ನು ಕಂಡಿರುತ್ತೇವೆ. ಅವರದು ಇಷ್ಟು ಕಷ್ಟವಾದ ತಪಸ್ಸಲ್ಲ ಮೇಲಾಗಿ ಸಂಸಾರದಲ್ಲಿದ್ದುಕೊಂಡು ತಪಸ್ಸನ್ನು ಮಾಡುವುದುದರಿಂದ ಅವಳ 'ಕಟು ತಪಸ್ಯೆ' ಎನ್ನುವುದರಲ್ಲಿ ಅನುಮಾನವಿಲ್ಲ.

ನೀನೇ ರತಿ ನೀನೆಯೆ ಗರತಿ
ಎದೆ ಎದೆಗೂ ಹೂವಾರತಿ
ನೀನಿರದಿರೆ ಲೋಕದ ಗತಿ
ದುರ್ಗತಿ, ಮೃತಿ, ದೇವರೆ ಗತಿ!

'ನೀನೆ ರತಿ ನೀನೆಯ ಗರತಿ' ಎನ್ನುವಲ್ಲಿ ಕವಿ ಸ್ತ್ರೀಯ ಎರಡು ಮುಖಗಳನ್ನು ಪ್ರಸ್ತಾಪಿಸುತ್ತಾರೆ. ಅವಳು ರತಿ, ಗರತಿಯಾಗಿದ್ದಾಳೆ. 'ನೀನಿರದಿರೆ ಲೋಕದ ಗತಿ ದುರ್ಗತಿ ಮೃತಿ' ಎನ್ನುತ್ತಾರೆ. ಕವಿ. ಅಂದರೆ ಜನ್ಮದಾತೆಯಾಗಿ, ತಾಯಿಯಾಗಿ, ಪುರುಷರಿಗಿಲ್ಲದ ಕರ್ತವ್ಯಗಳನ್ನು ನಿರ್ವಹಿಸುವ ಹೆಣ್ಣು ಇಲ್ಲದಿದ್ದರೆ ಲೋಕವೇ ಇರುತ್ತಿರಲಿಲ್ಲ ಎಂದರ್ಥ. ಇಷ್ಟೆಲ್ಲ ಮಹತ್ವ ಪಡೆದಿರುವ ಗರತಿಯನ್ನು ಕವಿ 'ಚಿಂತಾಪಸಿ' 'ರೂಪಸಿ' 'ಓ ಪಾರ್ವತಿ' ಎಂದೆಲ್ಲ ಕರೆಯುತ್ತಾರೆ. ಹೆಣ್ಣು ಹೆಣ್ಣಲ್ಲ, ಹೆಣ್ಣು ರಾಕ್ಷಸಿಯಲ್ಲ, ಹೆಣ್ಣು ಮಾಯೆಯಲ್ಲ. ಅವಳು ಸಾಕ್ಷಾತ್ ಪಾರ್ವತಿಯಾಗಿದ್ದಾಳೆ. ಅಲ್ಲಮನೂ ಹೇಳಿಲ್ಲವೇ. 'ಹೆಣ್ಣು ಮಾಯೆ. ಎಂಬರು, ಹೊನ್ನು ಮಾಯೆಯೆಂಬರು. ಹೆಣ್ಣು ಮಾಯೆಯಲ್ಲ ಹೊನ್ನು ಮಾಯೆಯಲ್ಲ ಮನದ ಮುಂದಣ ಆಸೆಯೇ ಮಾಯೆ,' ಎಂದು. ಅವಳಿಂದಲೇ ಗಂಡಿನ ಉದ್ಧಾರ, ಸಮಾಜದ ಜಗತ್ತಿನ ಕಲ್ಯಾಣ. ಎಂದೇ "ಯತ್ರನಾರ್ಯಂತು ಪೂಜ್ಯಂತೇ ತತ್ರ ರಮಂತೇ ದೇವತಾಃ" ಎಂದಿರುವುದು

ಮನೆ ಶಾಂತಿ ಸಂತೃಪ್ತಿಗಳ ಧಾಮವಾಗ ಬೇಕಾದರೆ ಮನೆಯ ಯಜಮಾನಿ ಗೃಹತಪಸ್ವಿನಿಯಾಗಬೇಕು. ತ್ಯಾಗ, ತಪಸ್ಸುಗಳಿಂದ ಗೃಹಿಣಿಯದು ಮನೆಯಲ್ಲಿ ಸಮಾನಾಧಿಕಾರವಾಗಿರದೆ ಪೂರ್ಣಾಧಿಕಾರವಾಗಿರುತ್ತದೆ. ಗೃಹಿಣಿ ಗೃಹತಪಸ್ವಿನಿಯಾದರೆ 'ಗೃಹಸ್ವಾಮಿನಿ' ಎನಿಸಿಕೊಳ್ಳುತ್ತಾಳೆ. ಅಂಥಹ ಗೃಹಗಳು ಶಾಂತಿ ಸಂತೃಪ್ತಿಗಳ ನೆಲೆಯಾಗುತ್ತವೆ ಪುರುಷರು ಮನೆಯಾಚೆ ಅಧಿಕಾರ, ಕೀರ್ತಿ, ಗೌರವಗಳಿಂದ ಮೆರೆಯಬಹುದು. ಅವರ ಮನಸ್ಸಿಗೆ ನೆಮ್ಮದಿ ಸಿಗಬೇಕಾದರೆ ಮೊದಲು ಮನೆಯಲ್ಲಿ ಸುಖಶಾಂತಿಗಳಿರಬೇಕು. ಇಲ್ಲದಿದ್ದರೆ ಅವರು ಹೊರಗಿನ ಪ್ರಪಂಚದ ಶಾಂತಿಯನ್ನು ಕೆಡಿಸುತ್ತಾರೆ. ಮನೆ ನೋಡದೆ ಗಂಡಸಿನಂತೆ ಕೀರ್ತಿಶನಿಯ ಬೆನ್ನು ಹತ್ತಿ ಪತಿಪುತ್ರರನ್ನು ಅಲಕ್ಷಿಸಿದರೆ ಮನೆಯಲ್ಲಿ ಸುಖ – ಶಾಂತಿಗಳು ಸಿಗುವುದಿಲ್ಲ. ಆದ್ದರಿಂದ ಗಂಡಸರಿಗೆ ಹಿಡಿದಿರುವ ಕೀರ್ತಿಯ ಹುಚ್ಚು ನಿನ್ನನ್ನು ಹಿಡಿಯದಿರಲಿ ಎಂದು ಕವಿ ಎಚ್ಚರಿಸುತ್ತಾ

ಹಿಡಿಯದಿರಲಿ ನಿನಗಾದರೂ
ಗಂಡಸರಾ ಕುತ್ತ
ಪ್ರಖ್ಯಾತಿಯ ಪಡೆಯುವೊಂದು
ಪ್ರಾಪಂಚಿಕ ಪಿತ್ತ

ಎಂದು ವಿನಂತಿಸಿಕೊಳ್ಳುತ್ತಾರೆ. ಒಂದು ವೇಳೆ ಗರತಿ ಕೀರ್ತಿಯ ಬೆನ್ನುಹತ್ತಿದರೆ ಏನಾಗುತ್ತದೆ ಎಂಬುದನ್ನು

ಹೊಸಲಾಚೆಗೆ ನೀನೋತರೆ
ಹೊಸಲೀಚೆಗೆ ಬಳಕಿಲ್ಲ
ಹೆಸರಾಸೆಗೆ ನೀನೋತರೆ
ಉಸಿರಾಸೆಯೆ ನಮಗಿಲ್ಲ

ಚಿತ್ರಿಸಿದ್ದಾರೆ. ನಿಜ – ಗೃಹಿಣಿ ಕೀರ್ತಿಯ ಆಸೆಗಾಗಿ ಹೊಸಿಲು ದಾಟಿದರೆ ಆ ಮನೆ ಕತ್ತಲೆಯ ಕೂಪವಾಗುತ್ತದೆ. ಮನೆಯವರ ಮನಸ್ಸು ಕತ್ತಲೆಯಿಂದ ಕವಿದು ಹೋಗುತ್ತದೆ. ಒಟ್ಟಾರೆ ಮನೆ ಮನಸ್ಸು ಶೂನ್ಯವಾಗುತ್ತದೆ. ಹೆಸರಿಗಿಂತ ಉಸಿರು ಮುಖ್ಯವಾದದು,

ಗಂಡನನ್ನು ಸುಸಂಸ್ಕೃತನನ್ನಾಗಿ ಮಾಡುವ ರೂವಾರಿಯಾಗಿದ್ದಾಳೆ. ಒರಟಾಗಿರುವ ಕಲ್ಲನ್ನು ಸುಂದರ ವಿಗ್ರಹವಾಗಿ ಕಡೆಯುವ ಶಿಲ್ಪಿ ಅವಳು.

ಪ್ರಸಿದ್ಧ ಲೇಖಕಿ ಪರ್ಲ್‌ಬಕ್ ಅವರು "ಒಬ್ಬ ಗಂಡಸಿನ ಗುಣವನ್ನು ಅವನ ಹೆಂಡತಿಯ ನಡವಳಿಕೆಯನ್ನು ತಿಳಿಯುವವರೆಗೂ ನಾವು ಅರಿಯಲಾರೆವು" ಎಂದಿದ್ದಾರೆ ಅವಳ ಧ್ಯಾನ ತಪಸ್ಸುಗಳೇ ಪತಿಗೆ ಶ್ರೀರಕ್ಷೆ. ಇದಕ್ಕೆ ನಿದರ್ಶನವಾಗಿ ಕುವೆಂಪುರವರ ಶ್ರೀರಾಮಾಯಣದರ್ಶನಂ ಕಾವ್ಯದಲ್ಲಿ ಬರುವ ಎರಡು ಪ್ರಸಂಗಗಳನ್ನು ಪರಿಶೀಲಿಸಬಹುದು. ರಾಮಲಕ್ಷ್ಮಣರು ವನವಾಸಕ್ಕೆ ಹೋದಾಗ ಪರ್ಣಕುಟಿಯಲ್ಲಿ ವಾಸಿಸುತ್ತಿದ್ದರು. ಲಕ್ಷ್ಮಣನು ಕಾಡಿನಲ್ಲಿರುವ ಸೌದೆಯನ್ನು ಅತ್ತಿಗೆಗೆ ಒಲೆಗಾಗಿ ತಂದು ಕೊಡುತ್ತಿದ್ದನು. ಒಂದು ಸಲ ಹಸಿಕಟ್ಟಿಗೆಯನ್ನು ಲಕ್ಷ್ಮಣನು ತಂದಿದ್ದನೆಂದು ಕಾಣುತ್ತದೆ. ಒಲೆ ಉರಿಯಲಿಲ್ಲ. ಸೀತೆಗೆ ಮೈಕೈಯೆಲ್ಲ ಮಸಿಯಾಗಿ, ಹೊಗೆಯಿಂದ ಕಣ್ಣು ಕೆಂಪಗಾಗಿದೆ. ಹಸಿದು ಬಂದ ಶ್ರೀರಾಮನು ಅಡಿಗೆ ಮನೆಗೆ ಬಂದು ನೋಡುತ್ತಾನೆ. ಸೀತೆಯ ಕೋಡಂಗಿ ರೂಪ ರಾಮನಿಗೆ ತಡೆಯಲಾರದ ನಗುವನ್ನು ತರುತ್ತದೆ ಅವನು ನಗುತ್ತಾ 'ಲಕ್ಷ್ಮಣ ನಿನ್ನ ಅತ್ತಿಗೆಯನ್ನು ನೋಡು ಬಾ' ಎಂದು ಕರೆಯುತ್ತಾನೆ. ಲಕ್ಷ್ಮಣನು ಒಂದು ಅತ್ತಿಗೆಯನ್ನು ನೋಡುತ್ತಾನೆ ಅವನಿಗೆ ನಗು ಬರುವುದಿಲ್ಲ. ಅವನಿಗೆ ತನ್ನ ತಪ್ಪಿನ ಅರಿವಾಗಿ ಒಲೆಯನ್ನು ಊದಲು ಹೋಗುತ್ತಾನೆ. ಅವನಿಗೂ ಒಲೆ ಉರಿಯುವುದಿಲ್ಲ. ಆಗ ಒಣಪುಳ್ಳೆಗಳನ್ನು ಹಾಕಿ ಪತ್ನಿ ಊರ್ಮಿಳೆಯನ್ನು ನೆನೆದು ಊದಿದೊಡನೆ ಧಗ್ಗನೆ ಅಗ್ನಿ ಚಿಮ್ಮುವುದು. ಇನ್ನೊಂದೆಡೆ ಒಮ್ಮೆ ವಾಲಿ ದುಂದುಭಿಯ ಮಗನನ್ನು ಕೊಲ್ಲಲು ಅವನು ಅವಿತುಕೊಂಡಿರುವ ಗುಹೆಯನ್ನು ಪ್ರವೇಶಮಾಡುತ್ತಾನೆ. ಬಾಗಿಲಲ್ಲಿ ಸುಗ್ರೀವನನ್ನು ನಿಲ್ಲಿಸಿ ಹೋಗುತ್ತಾನೆ. ನೂರುದಿನ ಕಾದರೂ ಹೊರಬರದಿದ್ದ ಗುಹೆಗೆ ಕಲ್ಲು ಬಂಡೆ ಅಡ್ಡವಿಟ್ಟು ಸುಗ್ರೀವನು ಮನೆಗೆ ಬರುತ್ತಾನೆ- ಕೆಲ ಕಾಲದ ನಂತರ ಶತ್ರುವನ್ನು ಕೊಂದ ವಾಲಿ ಗುಹೆಯ ಬಾಗಿಲಿಗೆ ಬರುತ್ತಾನೆ ಬಾಗಿಲು ದೊಡ್ಡ ಕಲ್ಲು ಬಂಡೆಯಿಂದ ಮುಚ್ಚಿದೆ ಬಾಗಿಲಿಗಿಟ್ಟಿರುವ ಬಂಡೆಯನ್ನು ನೂಕುತ್ತಾನೆ. ಅದು ಸರಿಯುವುದಿಲ್ಲ. ಪತ್ನಿ ತಾರೆಯನ್ನು ನೆನೆದು ನೂಕಲು ಸರಿಯುವುದು. ಈ ಎರಡು ಪ್ರಸಂಗಗಳಲ್ಲಿ ಸತಿಯ ಶ್ರೀರಕ್ಷೆ ಪತಿಗಿರುವುದನ್ನು ಕವಿ ಸೊಗಸಾಗಿ ಚಿತ್ರಿಸಿರುವರು ಸತಿಯ ತಪಸ್ಸು ಪತಿಗೆ ಮಾತ್ರವಲ್ಲ, ಕುಟುಂಬಕ್ಕೂ ಲೋಕಕ್ಕೂ ಮಂಗಳವನ್ನು ತರುತ್ತದೆ. ಲಕ್ಷ್ಮಣನು ಊರ್ಮಿಳೆಯನ್ನು 'ತಪಸ್ವಿನಿ' ಎಂದಿದ್ದಾನೆ. "ನೀರವ ಧ್ಯಾನವಧೂ ಹೇ ಊರ್ಮಿಳಾದೇವಿ, ಪೆಣ್ಣೆಂಬ ತಪಕೆ ನೀಂ ನಿರುಪಮ ಪ್ರತಿಮೆಯಾ" ಎನ್ನುವುದು ಲಕ್ಷ್ಮಣನ ಮಾತು. ಬಾಣ ಭಟ್ಟನ ಕಾದಂಬರಿಯಲ್ಲಿ ಪುಂಡರೀಕ, ಶ್ರೀರಾಮಯಣದರ್ಶನಂನಲ್ಲಿ ರಾವಣ ಉದ್ಧಾರವಾಗುವುದು ಅವರವರು ಕೈಹಿಡಿದ ಸತೀಮಣಿಯರ ತಪಸ್ಸಿನ ಶಕ್ತಿಯಿಂದಲೇ. ಹೆಣ್ಣು ದಾರಿತಪ್ಪುವುದಕ್ಕೆ ಹೆಜ್ಜೆಯಿಟ್ಟರೆ ಯಾರೂ ಸರಿತಿದ್ದಲಾರರು. ಅದೇ ಗಂಡು ತಪ್ಪು ದಾರಿ ಹಿಡಿದರೆ ಹೆಣ್ಣು ಸರಿತಿದ್ದಬಲ್ಲಳು ರಾಮಾಯಣ ಶಾಕುಂತಲ, ಕಾದಂಬರಿಗಳಲ್ಲಿ ಹೆಣ್ಣಿಗೆ ಅಗ್ರಸ್ಥಾನ ರಾಮಾಯಣ ಎಂದರೆ 'ಸೀತಯೂಶ್ಚರಿತಂ' ಎಂದಲ್ಲವೆ? 'ರಾಮಾ' ಎಂದರೆ ಲಕ್ಷ್ಮಿ ಎಂಬ ಅರ್ಥವೂ ಇರುವುದರಿಂದ ಇದು ಅಥವಾ ಸೀತೆಯ ಕಥೆ ಎಂದು ಹೇಳುತ್ತಾರೆ. ಅವರಿಗೆ ಸರಿಸಮಾನ ಹೆಗಲೆಣೆ ಈ ಗರತಿ ಎಂದು

ಆ ಸೀತೆಯೋ ಮಾಶ್ವೇತೆಯೋ
ಸಾವಿತ್ರಿಯೊ ದಮಯಂತಿಯೊ
ಆರಾದರೂ ಸರಿಯೆ
ಹೆಗಲೆಣೆ ನಿನಗಾ ಪೆರ್ಮೆಗೆ
ಪಿರಿದನು ನಾನರಿಯೆ

ಎಂದು ಸಾರುತ್ತಾರೆ. ಕೊನೆಗೆ 'ತಾಳುತಿದೆ ಬಾಳುತಿದೆ, ನಿನ್ನಿಂದೆಮ್ಮ ಇಳೆ' ಎನ್ನುತ್ತಾರೆ ಕವಿವರ್ಯರು ಗಂಡಸು ಗಂಡಷ್ಟೇ ಆಗಿರುತ್ತಾನೆ ಆದರೆ ಹೆಣ್ಣು ಹಾಗಲ್ಲ. ಆಂಗ್ಲದಲ್ಲಿ ಹೇಳುವಂತೆ ಒಬ್ಬ ಹೆಂಡತಿಯು ತನ್ನ ಗಂಡನಿಗೆ ಒಬ್ಬ ದೇವತೆಯಂತೆ. ಅವಳು ಜೀವನದ ಎಲ್ಲ ಸುಖ-ಸಂತೋಷಗಳಿಗೂ ಮೂಲ ನೋವನ್ನು ನಿವಾರಿಸಿ ಸಂತೋಷವನ್ನು ಕೊಡುವವಳು ಆಕೆಯೇ ಆಕೆಯದು ಉನ್ನತ ಮಟ್ಟದ ಆಶ್ರಯ ಅವಳು ಸುಖ, ನೆಮ್ಮದಿ, ಸಹನೆ ಮತ್ತು ಪ್ರೇಮವನ್ನು ತರುವಳು. ಅವಳು ಸ್ತ್ರೀಯಾಗಿ ತಾಯಾಗಿ, ಹೆಂಡತಿಯಾಗಿ, ಅಕ್ಕನಾಗಿ, ಅತ್ತಿಗೆಯಾಗಿ, ಮೆರೆದು ಮಾಡುವ ಕರ್ತವ್ಯ ನಿರ್ವಹಣೆ ಅಪಾರ. ಆದ್ದರಿಂದ ಹೆಣ್ಣು ಕವಿದೃಷ್ಟಿಯಲ್ಲಿ ಗೃಹಿಣಿ, ಗರತಿ, ದೇವತೆ, ತಾಯಿಯಾಗಿದ್ದಾಳೆ.

ಹೆಸರಿಲ್ಲದ ಮಹಿಳೆ
ಮಣಿವೆನು ಇದೋ ನಿನ್ನಡಿಗೆ
ಹುಸಿವೆಸರಿಗೆ ಮರುಳಾದ
ಹೆಸರೊಲ್ಲದ ಹಸುಳೆ

ಇಲ್ಲಿ ಕವಿಗಳು ಹೆಣ್ಣನ್ನು ತಾಯಿಯನ್ನಾಗಿ ಕಂಡು ತಾವು ಮಗುವಾಗಿ ಆ ತಾಯಿಯನ್ನು ಪೂಜಿಸಿರುವುದನ್ನು ನೋಡಬಹುದು ಮಹಿಳೆ ಕೀರ್ತಿಯನ್ನು ಬಯಸಬಾರದು ಎಂಬುದು ಕವಿಯ ಆಶಯ. ಬಯಸಿದರೆ ಕೇಡುತಪ್ಪುವುದಿಲ್ಲ. ಮತ್ತೊಮ್ಮೆ ಈ ಬಗ್ಗೆ ಅವಳನ್ನು ಎಚ್ಚರಿಸುತ್ತಾ.

ಹಿಡಿಯದಿರಲಿ ನಿನಗವರಾ
ಹೊಗಳಿಕೆಯಾ ಕೀರ್ತಿಯ ಶನಿ
ಗೃಹಗೃಹ ಗೃಹ ತಪಸ್ವಿನೀ
ಪತ್ರಿಕೆಗಳ ದಪ್ಪಕ್ಷರ

ಎಂದು ವಿನಂತಿಸಿಕೊಂಡಿದ್ದಾರೆ. "ಮೇಣ್ ಚಿತ್ರದ ಕ್ಷಣಿಕಕೆ ನೀ ಬೆಪ್ಪಾಗದೇ, ಹೇ ಜನನೀ ಒಪ್ಪಾಗಿರು ಒಲವಾಗಿರು! ನಿಜಮತದಲಿ ಋಜುಪಥದಲಿ! ನಡೆಸೆಮ್ಮನು ಋತದರ್ಶಿನಿ! ಹೇ ಮನುಕುಲ ಕಲ್ಯಾಣೀ! ಗೃಹ ಗೃಹ ತಪಸ್ವಿನೀ" ಎನ್ನುವಲ್ಲಿ ಕವಿಗಳು ಅಸಂಖ್ಯಗೃಹಗಳು, ಅಸಂಖ್ಯ ತಪಸ್ವಿನಿಯರು ಎಂಬುದನ್ನು ಧ್ವನಿಸಿದ್ದಾರೆ. ಕವಿ ಕಂಡ ಇಲ್ಲಿನ ಗರತಿಯ ತಪಸ್ಸಿನ ಚಿತ್ರ ಭಾರತೀಯ ಸಂಸ್ಕೃತಿಯನ್ನು ಬಲ್ಲವರಿಗೆ ಅಸಹಜವಾಗಿ ಕಾಣುವುದಿಲ್ಲ.

ಈ ಸುಂದರ ಕವನದಲ್ಲಿ ಕವಿ ಲೌಕಿಕ ಕಣ್ಣಿಗೆ ಕಾಣಿಸದೆ ಅಜ್ಞಾತರಾಗಿರುವ ಅಸಂಖ್ಯಾತ ಗೃಹಿಣಿಯರನ್ನು ಉದ್ಧರಿಸಿದ್ದಾರೆ. 'Tapas Means literally to burn' ಎಂದಿದ್ದಾರೆ ಸ್ವಾಮಿ ವಿವೇಕಾನಂದರು. ಅನೇಕರು ಅರಣ್ಯಗಳಲ್ಲಿ ಕಠೋರ ತಪಸ್ಸನ್ನು ಮಾಡಿರುವುದನ್ನು ವೇದ, ಪುರಾಣ ಇತಿಹಾಸಗಳಲ್ಲಿ ಕಂಡಿದ್ದೇವೆ ಮನೆಮನೆಯಲ್ಲಿ ನಮ್ಮ ಕಣ್ಣ ಮುಂದೆ ಗರತಿಯರು ತಪಸ್ಸು ಮಾಡುತ್ತಿರುವುದನ್ನು ಕಂಡೂ ಕಾಣದಂತಿದ್ದೇವೆ ಆದರೆ ಕವಿ ತಮ್ಮ ಪ್ರತಿಭಾದೃಷ್ಟಿಯಲ್ಲಿ ಮನೆಮನೆಯಲ್ಲೂ ಗೃಹಿಣಿಯರು ತಪಸ್ಸು ಮಾಡುತ್ತಿರುವುದನ್ನು ಸೊಗಸಾಗಿ ಚಿತ್ರಿಸಿದ್ದಾರೆ ಹೆಣ್ಣು ತನ್ನ ತ್ಯಾಗ, ಪಾತಿವ್ರತ್ಯ, ಸಹಿಷ್ಣುತೆಗಳಿಂದ ಎಲ್ಲಾ ಅನ್ಯಾಯಗಳನ್ನು ಭೂದೇವಿಯಂತೆ ಸಹನಾಮೂರ್ತಿಯಾಗಿ ಸೈರಿಸಿಕೊಂಡಿರುವುದು ತಪಸ್ಸಲ್ಲದೇ ಮತ್ತೇನಲ್ಲ. ತನ್ನ ಮನೆ ತನ್ನ ಸಂಸಾರಕ್ಕಾಗಿ ಹಗಲಿರುಳು ದುಡಿದು, ಎಲ್ಲರ ಮನಸ್ಸನ್ನನುಸರಿಸಿ ನಡೆದು ಮನೆಯನ್ನು ಅಚ್ಚುಕಟ್ಟಾಗಿಟ್ಟು ತನ್ನ ದುಡಿಮೆಯಲ್ಲೇ ಸಾರ್ಥಕತೆಯನ್ನು ಕಂಡುಕೊಳ್ಳುವ ಹೆಣ್ಣಿನ ಬಾಳು ತಪಸ್ಸಲ್ಲದೇ ಮತ್ತೇನು? ಹೆಣ್ಣನ್ನು ಕುರಿತು ಬಾಪೂಜಿ ಅವರು "ಅಹಿಂಸೆ ಎಂದರೆ ಅಪಾರ ಪ್ರೇಮ. ತಾಳ್ಮೆ, ಸಹನೆ, ಕಷ್ಟಾನುಭವದ ಪ್ರತಿರೂಪವೇ ಪ್ರೇಮವೆಂಬುದು. ಹಾಗಾದ ಪಕ್ಷದಲ್ಲಿ ಅಂತಹ ಸಾಮರ್ಥ್ಯ, ಶಕ್ತಿ ಇರುವುದು ತಾಯಿಯ ಪಾತ್ರದಲ್ಲಿರುವ ಸ್ತ್ರೀಗಲ್ಲದೆ ಮತ್ತಾರಿಗೆ ಸಾಧ್ಯ? ತ್ಯಾಗಮಯವಾದ ಸೇವೆ, ಅಪಾರ ಪ್ರೇಮವನ್ನು ಮಾನವ ಕೋಟಿಗೆ ಬೀರಿ ಪುರುಷನ ಪಕ್ಕದಲ್ಲಿ ಸ್ತ್ರೀಯು ಹೆಮ್ಮೆಯ ತಾಯಿಯ ಸ್ಥಾನವನ್ನು ಅಲಂಕರಿಸುವಳು ಸಮಾಜದ ಕಲ್ಯಾಣವಾಗ ಬೇಕಾದರೆ ಸ್ತ್ರೀಯರ ಪಾತ್ರ ಗಣ್ಯವಾದದು" ಹೇಳಿರುವ ಮಾತುಗಳು ತಪಸ್ಸು ಅಲ್ಲವೆ? ಇಡೀ ಕವನವೇ ಎಚ್ಚರಿಕೆಯಾಗಿದ್ದು ಗೃಹಿಣಿಯರಿಗೂ ಮತ್ತು ಗೃಹಸ್ಥರಿಗೂ ಮನನ ಯೋಗ್ಯವಾಗಿದೆ. ಮಾತೆಯರಾಗಿ ಕುಟುಂಬದ ಉನ್ನತಿಗೆ ಶ್ರಮಿಸಿ ಮಕ್ಕಳನ್ನು ನಾಡಿನ ಉತ್ತಮ ಪ್ರಜೆಗಳನ್ನಾಗಿ ತರಪೇತು ಮಾಡುವುದರಲ್ಲಿ ಸ್ತ್ರೀಯರ ಸ್ಥಾನ ಪ್ರಮುಖವಾದುದು. ಆದ್ದರಿಂದ ಮನೆಮನೆಯ ಗೃಹಿಣಿಯರ ಕರ್ತವ್ಯಗಳನ್ನು ಇಲ್ಲಿ ಗುರುತಿಸಿದ್ದಾರೆ ಕವಿ. ಕವಿಯ ಹಿತವಚನಗಳನ್ನು ಗೃಹಿಣಿಯರು ಗಮನಿಸಿ ಉದಾತ್ತವಾದ ಭಾರತೀಯ ಉಚ್ಚ ಸಂಸ್ಕೃತಿಯನ್ನು ಎತ್ತಿಹಿಡಿಯಬೇಕು. ಅವಳು ಗೃಹಿಣೀ ಗೃಹಮುಚ್ಯತೇ ಎಂದೆನಿಸಿಕೊಳ್ಳಬೇಕು ಇಂದಿನ ಹೆಣ್ಣು ಮುಂದಿನನಾಗರಿಕತೆ ಸಂಸ್ಕೃತಿಗಳಿಗೆ ಪೋಷಕಳಾಗಬೇಕು–

———

(18 ನೇ ಪುಟದಿಂದ)

ವನ್ನು ಬಲು ಚೆನ್ನಾಗಿ ಪೂರ್ಣ ರೀತಿಯಿಂದ ಮಾಡಿ ಮುಗಿಸಿರುವುದನ್ನು ಕಾಣಬಹುದು.

ನಾಡಭಾಷೆಯ, ಆಡುಭಾಷೆಯ, ಹಾಡಿನ ಎಂದರೆ ಪದ, ಪದ್ಯ ಸುಳಾದಿ, ಉಗಾಭೋಗ, ವೃತ್ತನಾಮ ಇತ್ಯಾದಿ ರೂಪಗಳಲ್ಲಿ ಒದಗಿದ ಹರಿದಾಸರ ದಿವ್ಯಬೋಧೆಯು, ಪಂಡಿತರಿಗಾಗಲಿ, ಪಾಂಡಿತ್ಯವಿಲ್ಲದವರಿಗಾಗಲೀ,ಓದಿದವರಿಗಾಗಲೀ, ಅಕ್ಷರಸ್ಥರಿಗಾಗಲೀ, ಅನಕ್ಷರಸ್ಥರಿಗಾಗಲೀ, ಗಂಡಸರಿಗಾಗಲೀ, ಹೆಂಗಸರಿಗಾಗಲೀ, ಹುಡುಗರಿಗಾಗಲೀ, ಮುದುಕರಿಗಾಗಲೀ, ಅಶಕ್ತರಾಗಿ ಒಂದೆಡೆ ಮೂಲೆ ಗುಂಪಾದವರಿಗಾಗಲೀ, ಇದ್ದಲ್ಲೇ ಒದಗಿ ಸಂತಸವಿತ್ತು ಮನನವಾಗುವಂತಹುದು. ಹೀಗೆ ಇಂತಹ ಬೋಧೆ ಕೇಳಿದವರೂ ಸಹ ತಾವೂ ಅನುಭವಿಸಿ ಉದ್ಧೃತರಾಗಿ, ಹಲವರು ತಾವೂ ಹರಿದಾಸರಾಗಿ ಹಾಡಿ ತಮ್ಮ ಪರಿವಾರ ಪರಿಸರಗಳಲ್ಲಿ ಬೋಧೆಯನ್ನು ಬೀರಿ ಮುಂದಿನ ತಮ್ಮ ಸಂತತಿಗೆ ತನ್ಮೂಲಕ ಜಗತ್ತಿಗೆ ಬೋಧೆಯೊದಗಿಸಿ ನಡೆದಿದ್ದಾರೆ. ಹೀಗೆ ಕೀರ್ತನ ಶ್ರವಣ ವಿಧಾನದಿಂದ ಹರಿದಾಸರ ಬೋಧೆಯು ಶಾಶ್ವತವಾಗಿ ಜಗತ್ತಿನಲ್ಲಿ ನೆಲೆಯೂರಿ, ಇಂದಿಗೂ ಲಭ್ಯವಾಗಿದೆ. ಹರಿದಾಸ ಬೋಧಾಜ್ಯೋತಿಯು ಅಖಂಡ ಪ್ರಕಾಶ ಬೀರುತ್ತ ಕುಂದದೆ, ನಂದದೆ, ಉರಿಯುತ್ತಲೇ ಇದೆ. ಅದು ಕುಟುಂಬದ ಅಡಿಗಲ್ಲಾದ ನಾರಿಯರನ್ನು ವಿಶೇಷವಾಗಿ ಆಕರ್ಷಿಸಿ, ಮಾತೃಸ್ಥಾನದಲ್ಲಿ ನೆಲೆಗೊಂಡು ಬಾಲ್ಯದಿಂದಲೇ ಮಕ್ಕಳ ಮನೆ ಬೆಳಗಿ ಸದ್ಬೋಧೆಯ ಭದ್ರವಾದ ತಳಪಾಯದ ಮೇಲೆ ಜ್ಞಾನ ಭಕ್ತಿಯ ಸೌಧವನ್ನೂ ನಿಲ್ಲಿಸುವಂತಾಗಿಸಿದೆ.

ಹರಿದಾಸರು ವೈಷ್ಣವದೀಕ್ಷಾಪರರು ಹರಿಸರ್ವೋತ್ತಮತ್ವ, ತಾರತಮ್ಯ, ಪಂಚ ಭೇದಗಳೆಂಬ ಸತ್ಸಿದ್ಧಾಂತಗಳು ಅವರ ಜೀವನದುಸಿರು. ಅವರು ವೈರಾಗ್ಯಶೀಲರು. ನಿಜವಾದ ವೈರಾಗ್ಯವೇನೆಂಬುದನ್ನು ಶ್ರೀ ಗೋಪಾಲದಾಸರಂತಹ ಮಹನೀಯರು ವಿವರಿಸಿರುತ್ತಾರೆ. ಹರಿದಾಸರು ಕರುಣಾಶಾಲಿಗಳು. ತಮ್ಮ ನಿಂದಕರನ್ನು ಶತ್ರುಗಳಂತೆ ನಡೆದು ಕೊಂಡವರನ್ನು ಸಹ ನಿಂದೆ ತಾತ್ಸಾರ ವೈರಗಳೆಣಿಸದೆ, ಉದ್ಧಾರವಮಾಡಿ ಅಂತಹವರಿಂದಲೇ ಸ್ತೋತ್ರಪಾತ್ರರಾಗಿರುವ ವಿಚಿತ್ರ ಕರುಣೆ ಅವರದು. ಈ ವಿಷಯಕ್ಕೆ ಜ್ವಲಂತ ಉದಾಹರಣೆಗಳೆಂದರೆ ಶ್ರೀ ಜಗನ್ನಾಥದಾಸರು, ಶ್ರೀ ವ್ಯಾಸವಿಠಲಾಂಕಿತರಾದ ದಾಸರ ಉದ್ಧಾರ ಪ್ರಸಂಗಗಳು, ಅವರ ಉದ್ಧಾರಕರ್ತರಾದ ಶ್ರೀ ವಿಜಯದಾಸರ ಚರಿತ್ರೆಯಲ್ಲಿ ಕಾಣಸಿಗುವುವು. ಹರಿದಾಸರು ಸ್ನೇಹಪರರು; ದೀನರಲ್ಲಿ, ದುಃಖಿತರಲ್ಲಿ; ಅಷ್ಟೇಕೆ ಅವರು ಸ್ನೇಹವು ಮಾನವ ವರ್ಗದ ಎಲ್ಲೆ ಮೀರಿ ಪ್ರಾಣಿವರ್ಗಕ್ಕೂ ಪಸರಿಸಿ ಸುಖ ಸಮಾಧಾನ ತಂದಿರುವುದು ಅಪೂರ್ವ ವಿಷಯ.

ಹರಿದಾಸರು ಸದಾಚಾರ ಸಂಪನ್ನರು, ಸರಳರು, ರಾಗರಹಿತರು, ಭೋಗಲಾಲಸೆ ಬಿಟ್ಟವರು ಆದರೆ ಜಡಕರ್ಮವನ್ನೇ ಹಿಡಿಯುವವರಲ್ಲ, ಮೋಸಹೋಗುವವರಲ್ಲ. ದರಿದ್ರರಲ್ಲ, ಕೋಪಿಷ್ಟರಲ್ಲ, ನಿಷ್ಕಾರಣವಾಗಿ ಶುಷ್ಕ ದೇಹ ದಂಡನೆ ಮಾಡುವವರಲ್ಲ, ಡಾಂಭಿಕತನ, ಮೋಸ ಮುಚ್ಚುಮರೆಗಳನ್ನು ಸಹಿಸದೆ, ಖಂಡತುಂಡ ಮಾತುಗಳಲ್ಲಿ ಖಂಡಿಸಿ ನಡೆದಿರುವರು. ಹರಿದಾಸರು ವಿನಯಪರರು. ಸೋತ್ರಮರಲ್ಲಿ ಭಕ್ತಿ ಗೌರವಗಳನ್ನಿಟ್ಟವರು. ಎಂದೂ ತಮ್ಮನ್ನಾಗಲೀ ತಮ್ಮ ಕಾರ್ಯವನ್ನಾಗಲಿ ಹೊಗಳಿ ಕೊಂಡವರಲ್ಲ. ತಮ್ಮನ್ನೇ ಬಡದಾಸ ಅಡಿದಾಸ, ಕೊಂಕುದಾಸ, ದಾಸರ ದಾಸರದಾಸಿಯರ ಮಗ, ದಾಸರ ಮನೆಯ ನಾಯಿ ಎಂದು ಬಿಚ್ಚುಮನದಿಂದ ಹೇಳಿಕೊಳ್ಳುವುದರಲ್ಲಿ ಅವರಿಗೆ ಸಂಕೋಚವಿಲ್ಲ. ಅವರು ಅಹಂಕಾರ, ಮಮಕಾರ ಬಿಟ್ಟವರು. ಸರ್ವಸ್ವಾಮಿತ್ವವನ್ನು ಹರಿಗೇ ಬಿಟ್ಟುವರು

ಹರಿದಾಸರು ಹರಿಸೇವಾ ದೀಕ್ಷೆಯಲ್ಲಿ ಅಚಲರು. ಅಲುಗಾಡದ ನಿಷ್ಠೆ, ಸನ್ಮತ ಶ್ರದ್ಧೆಯಲ್ಲಿ ಅವರದು ಎತ್ತಿದ ಕೈ. ಹರಿದಾಸರು ಪಾವನಕರಮೂರ್ತಿಗಳು. ಅವರು ಮೆಟ್ಟಿದ ಮನೆ, ಮುಟ್ಟಿದವಸ್ತು, ಪಾವನ. ಅವರ ದರ್ಶನವೇ ಹರುಷ, ಅವರಿಂದ ಕುಲ ಕೋಟಿಯೇ ಪಾವನ.

ಹರಿದಾಸರಿಗೆ ಹರಿಪ್ರಸಾದ ವಿಶೇಷವಾಗಿ ಲಭಿಸಿದೆ. ಅವರ ಲೀಲೆಯಿಂದ ಹರಿಗೆ ಬಹುತೃಪ್ತಿ. ಪಕ್ಷಿಯಂತೆ, ರೆಕ್ಕೆಯಲ್ಲಿಟ್ಟು, ಹರಿ ಅವರನ್ನು ಸಾಕುವವ. ಅವರಿಗೆ ಆದಿವ್ಯಾಧಿಗಳಿಲ್ಲ, ಅಶುಭವಾರ್ತೆಗಳಿಲ್ಲ, ಕ್ರೋಧ ನೃಪಭಯವಿಲ್ಲ, ಖಿನ್ನತೆಯಿಲ್ಲ, ಕಾಕುಮತಿಯಿಲ್ಲ. ಅರಿಗಳೇ ಸಖರಾಗಿ, ಅತಿವಿಷ ಅಮೃತವಾಗಿ ಹಾವು ಹೂವಾಗಿ, ಉರಿ ತಣ್ಣಗಾಗಿ, ಶರಧಿ ಗೋಷ್ಪದವಾಗಿ, ಶರಘಾತ ಬೆಂಡಾಗಿ ಅವರಿಗೆ ಸುಖತರುವುವು. ಪಾಪಗಳೋಡವುವು. ಹಿರಿದಾಗಿ ಬಂದ ಎಡರು ಎತ್ತ್ರೋ ಓಡುವುದು, ಕೋಪ, ದಾರಿದ್ರ್ಯ, ಕಲಿ ವ್ಯಸನ, ಪದಗಳು, ಅವರನ್ನು ಮುಟ್ಟಲಾರದೆ ಓಡುವುವು.

ಹರಿದಾಸರೆಂದರೆ ನವ ವಿಧ ಭಕ್ತಿಯ ನವರಸ ಕಲಶಗಳು. ಅವರು ಪರಮಾತ್ಮನನ್ನು ಪ್ರಸನ್ನೀಕರಿಸಿ ಕೊಂಡಿರುವ ಬಗೆ, ಜಗತ್ತಿನ ಮುಂದೆ ಅನುಕರಣೆಗೆ ಸಿದ್ಧವಾಗಿದೆ. ಯಾರು ಬೇಕಾದರೂ, ಅವರನ್ನನುಸರಿಸಿ, ಸ್ವಯೋಗ್ಯತೆಯಾಧಾರಿತ ಫಲಗಳಿಸಬಹುದು. ಹರಿದಾಸರ ಭಕ್ತಿ ರಸದಲ್ಲಿ ತೋಯಿದು ಮಜ್ಜನವಾಯಿತೆಂದರೆ ಮುಪ್ಪು, ರೋಗೋಪದ್ರವ ಮತ್ತು ಮರಣ ಭಯಗಳೋಡಿ ಅಮರತ್ವ ಸಿದ್ಧಿ ಸಿದಂತೆಯೇ ಸರಿ ಸ್ವಸ್ಥಮನ ಸಮಚಿತ್ತಗಳಿದ್ದ ದೇಹಕ್ಕೆ ಮುಪ್ಪೆಲ್ಲಿಯದು? ರೋಗವೆಲ್ಲಿಯದು ? ಮರಣ ಭೀತಿಯೆಲ್ಲಿಯದು? ಆನಂದದಿಂದ ತುಂಬ ಪ್ರಸನ್ನತೆ ಪಡೆದ ಮನಸ್ಸಿನ ದೇಹ ಆರೋಗ್ಯ ಪಡೆಯದೆ ಇರಲು ಹೇಗೆ ತಾನೆ ಸಾಧ್ಯ?

ಹರಿದಾಸರ ಕೀರ್ತಿಕಲಶವು ಅಲಂಕರಿಸಿರುವುದು, ಇವೆಲ್ಲ ಕಲ್ಯಾಣಗುಣಗಳಿಂದ ನಿರ್ಮಿತವಾದ ಹರಿ ಪ್ರಸಾದದ ಪ್ರಕಾಶ ಚೆಲ್ಲುತ್ತಿರುವ ಅವರ ಅಪಾರ–ಅಖಂಡವಾದ ಕಾವ್ಯಗಳಿಂದ ಹರಿಗುಣ ರೂಪಕ್ರಿಯೆಗಳನ್ನೇ ಮುಖ್ಯವಾಗುಳ್ಳ, ಪದ, ಪದ್ಯ, ಸುಳಾದಿ, ಉಗಾಭೋಗಗಳನ್ನು ತರಂಗವಾಗುಳ್ಳ ಅವರ ಗಾನವಾಹಿನಿ ಮಧುರ ಧ್ವನಿಯನ್ನೇ ಅಲ್ಲಿ ಹರಿಸುತ್ತಿದೆ ಅವರ ಗದ್ಯ ಸೌರಭ ಅಲ್ಲಿ ಹರಿಡಿದೆ. ಶಾಂತದಾಸ್ಯ, ಸಖ್ಯ; ಮಧುರ, ವಾತ್ಸಲ್ಯಗಳೆಂಬ ಪಂಚಭಾವಗಳ ದಿವ್ಯಫಲ ರಸಾಯನ ಅಲ್ಲಿ ಸವಿಯ ಸಿಗುತ್ತದೆ

ಹರಿದಾಸ ನಂದನವನವು ಇಂದಿಗೂ ಹಸಿರಾಗಿ, ಸುಮಭರಿತವಾಗಿ, ಫಲಭರಿತವಾಗಿ ಮೆರೆದಿದೆ. ಅಂದಿನ ಕಮಲಾಪತಿ ದಾಸರು ಶ್ರೀರಘುಪತಿವಿಠಲಾಂಕಿತರು, ಶ್ರೀಭೂವರಾಹ ರಘುಪತಿವಿಠಲಾಂಕಿತರು, ತಂದೆ ಶ್ರೀಪತಿ ವಿಠಲಾಂಕಿತರು, ಶ್ರೀನಿಧಿ ವಿಠಲಾಂಕಿತರು, ಶ್ರೀವರದವಿಠಲಾಂಕಿತರು, ಮುಂದಿನ ಚಿಕ್ಕೆರಹಳ್ಳಿ ತಿಮ್ಮಣ್ಣದಾಸರು, ಪ್ರಸನ್ನ ವೆಂಕಟ ವಿಠಲಾಂಕಿತರು, ವಿಜಯರಾಮ ಚಂದ್ರವಿಠಲಾಂಕಿತರು, ಜಯೇಶವಿಠಲಾಂಕಿತರು, ಬಾದರಾಯಣ ವಿಠಲದಾಸರು, ಮಣೂರುದಾಸರು, ಹರಪನಹಳ್ಳಿ ಭೀಮವ್ವ, ಮುದ್ದು ಮೋಹನ ವಿಠಲಾಂಕಿತರು, ತಂದೆ ಮುದ್ದು ಮೋಹನವಿಠಲಾಂಕಿತರು, ಉರಗಾದ್ರಿವಾಸ ವಿಠಲಾಂಕಿತರು ಮತ್ತು ಹರಿದಾಸವರರಾಗಿ ಶಿಷ್ಯಕೋಟಿಯ ಮಧ್ಯೆ ಹೊಳೆಹೊಳೆಯುತ್ತಿರುವ ಗುರುಗೋವಿಂದ. ದಾಸರು ಈ ನಂದನವನದ ಸುಂದರ ಸುಗಂಧ ಸುಮಗಳು ಗುಪ್ತ ಸಾಧಕರಾಗಿ ಕಣ್ಣಿಗೆ ಬೀಳದಿರುವ ಇತರ ಮಹನೀಯರದೆಷ್ಟಿರುವರೋ ಬಲ್ಲವರು ಯಾರು ?

ಶ್ರೀ ಕೃಷ್ಣಾರ್ಪಣಮಸ್ತು

# ಕಿಶೋರ ಜಗತ್



## ತಮಸೋಮಾ ಜ್ಯೋತಿರ್ಗಮಯ

—ಶ್ರೀಮತಿ ರಾಧಾ ಅನಂತರಾಮನ್

[ಪೀಠಿಕೆ – ದೇವತೆಗಳಿಗೂ – ರಾಕ್ಷಸರಿಗೂ ಯುದ್ಧ ನಡೆದು ಆ ಯುದ್ಧದಲ್ಲಿ ದೇವತೆಗಳೇ ಗೆದ್ದರು. ಆದರೆ ಅವರು, ತಮ್ಮ ಅಹಂಕಾರವನ್ನು ಗೆಲ್ಲಲಿಲ್ಲ. ಆಗ ಪರಮೇಶ್ವರ ದೇವತೆಗಳ ಅಹಂಕಾರವನ್ನು ಅಡಗಿಸಿದ, ಹೇಗೆ? ಎಂಬುದೇ 'ತಮಸೋಮ ಜ್ಯೋತಿರ್ಗಮಯ'ದ ಸಂಕೇತ.]

### ನೋಟ—೧

(ಇಂದ್ರ, ಅಗ್ನಿ, ವಾಯು, ವರುಣ ದೇವತೆಗಳು ತಮ್ಮ-ತಮ್ಮ ಅಹಂಕಾರವನ್ನು ಪ್ರದರ್ಶನ ಮಾಡುತ್ತಾರೆ)

ಇಂದ್ರ :– ಎಲೈ ಅಗ್ನಿ, ವಾಯು, ವರುಣರೇ ಕೇಳಿರಿ, ಈ ನನ್ನ ವಜ್ರಾಯುಧದಿಂದ, ಆ ರಾಕ್ಷಸರನ್ನು ಸೋಲಿಸಿ ನಾನು ಈ ಸುರಲೋಕವನ್ನು ಉಳಿಸಿಕೊಂಡೆ, ಇಲ್ಲದಿದ್ದರೆ...

ಅಗ್ನಿ :– ನಿಮ್ಮಿಂದ ಅಲ್ಲ ಇಂದ್ರದೇವ, ಈ ನನ್ನ ಅಗ್ನಿಜ್ವಾಲೆಯಿಂದ ಶತ್ರುಗಳನ್ನು ಸುಟ್ಟು, ಈ ದೇವಲೋಕವನ್ನು ನಾನು ಉಳಿಸಿದೆ...

ವಾಯು :– ನಿನ್ನಿಂದಲೂ ಅಲ್ಲ ಅಗ್ನಿದೇವ, ರಾಕ್ಷಸರನ್ನು ನನ್ನ ಸುಂಟರಗಾಳಿಯಿಂದ ದಮನ ಮಾಡಿ ನಾನು ಈ ಲೋಕವನ್ನು ದಕ್ಕಿಸಿಕೊಟ್ಟೆ...

ವರುಣ :– (ನಗುತ್ತಾ) ವಾಯುದೇವ ಕೇಳು; ನೀನು ಮರೆತಿರುವಿ; ನಾನಲ್ಲವೇ! ಶತ್ರುಗಳನ್ನು ಆಲಿಕಲ್ಲು ಮಳೆಗಳಿಂದ ಕೊಚ್ಚಿಕೊಂಡು ಹೋಗುವಂತೆ ಮಾಡಿದ್ದು, ನಾನು ಇಲ್ಲದಿದ್ದರೆ.. ನಿಮಗೆ ಜಯವೇ ಲಭಿಸುತ್ತಿರಲಿಲ್ಲ.

ಇಂದ್ರ :– ಹೇ ಅಗ್ನಿ, ವಾಯು, ವರುಣರೇ! ನೀವು ನನ್ನ ಸುರಲೋಕದಲ್ಲಿ ಆಳಿನಂತೆ ದುಡಿಯುವ ದೇವತೆಗಳು ನೆನಪಿರಲಿ; ನನ್ನ ಪ್ರತಿಭೆ, ಪಾಪ! ನಿಮಗೆ ತಿಳಿಯದು.

ಅಗ್ನಿ, ವಾಯು, ವರುಣ:– ಓಹೊ! ಓಹೊ! ನಾವ್ ಆಳಂತೆ! ಕೇಳು ಇಂದ್ರದೇವ, ನಮ್ಮ ಶಕ್ತಿ, ತೇಜಸ್ಸು, ವೇಗಗಳನ್ನು ಅಲ್ಲಗಳೆಯ ಬೇಡ. ನಾವಿಲ್ಲದಿದ್ದರೆ...ನೀನೂ ಇಲ್ಲ...ನಿನ್ನ ಸುರಲೋಕವೂ ಇರುತ್ತಿರಲಿಲ್ಲ, ತಿಳಿಯಿತೊ?

ಇಂದ್ರ :– ಆಗಲಿ, ನನ್ನ ಶೌರ್ಯ ಪ್ರತಾಪವೇನು ಎಂದುದನ್ನು ಇನ್ನು ಕೆಲವೇ ಕ್ಷಣಗಳಲ್ಲಿ ತೋರಿಸುತ್ತೇನೆ .. ನಿಮಗೆ

ಅಗ್ನಿ, ವಾಯು, ವರುಣ :– ನಾವೂ ತೋರಿಸುತ್ತೇವೆ ನಮ್ಮ ಬಲಾಬಲವನ್ನು ... ನೀನೂ ನೋಡುವೆಯಂತೆ.... (ಹೋಗುವರು)

### ನೋಟ—೨

(ಭೂತ, ಅಗ್ನಿಯರ ಪ್ರವೇಶ)

ಅಗ್ನಿ :– ಹೇ ಭೂತ! ನೀನು ಯಾರು?

ಭೂತ :– ನಾನು ಯಾರಾದರಾಗಲಿ, ನೀನು ಯಾರು?

ಅಗ್ನಿ :– ನಾನು ... ನಾನೇ ಅಗ್ನಿ – ಜಾತವೇದ.

ಭೂತ :– ನಿನ್ನಲ್ಲಿರುವ ಶಕ್ತಿ ಯಾವುದು?

ಅಗ್ನಿ :– ನನ್ನ ಶಕ್ತಿಯೇ...ಈ ಭೂಮಂಡಲ, ದೇವಮಂಡಲದಲ್ಲಿ ಏನೆಲ್ಲಾ ಇದೆಯೋ—ಅದನ್ನೆಲ್ಲಾ ನನ್ನ ಬೆಂಕಿಜ್ವಾಲೆಯಿಂದ ಸುಟ್ಟು—ಬೊಟ್ಟು ಇಡುವೆನು...ತಿಳಿಯಿತೋ ಭೂತವೇ!

ಭೂತ:– (ಆಶ್ಚರ್ಯದಿಂದ) ಹೌದೇ!...ಸರಿ ...ಎಲ್ಲ ಈ ಹುಲ್ಲುಕಡ್ಡಿಯನ್ನು ಸುಡು ನೋಡೋಣ

ಅಗ್ನಿ :– (ನಗುತ್ತಾ) ಈ ಹುಲ್ಲು ಕಡ್ಡಿಯನ್ನು ಸುಡಬೇಕೇ? ... ಹುಂ... ಆಗಲಿ... ಅಯ್ಯೋ! ನನ್ನ ಶಕ್ತಿ ಕುಂದಿತೇ...ಈ ಕಡ್ಡಿಯನ್ನು ಸುಡಲು ಆಗಲಿಲ್ಲವಲ್ಲಾ...ಅಯ್ಯೋ...

ಭೂತ :– (ಅಣಕ) ಏನು ಅಗ್ನಿದೇವ! ಯಾಕೆ ನಾಚಿಕೆಯಿಂದ ತಲೆತಗ್ಗಿಸಿ ನಿಂತೆ ... ನಿನ್ನ ಶಕ್ತಿ ಶೌರ್ಯ ಏನಾಯಿತು?

(ವಾಯು ಪ್ರವೇಶ)

ವಾಯು :– ಹೇ ಪೆಡಂಭೂತವೆ, ಯಾರು ನೀನು?

ಭೂತ – ನಾನು...ನಾನೇ...ನೀನು ಯಾರು?

ವಾಯು :– ನಾನು ವಾಯು...ಮಾತರಿಶ್ವ

ಭೂತ : ನಿನ್ನಲ್ಲಿರುವ ಶಕ್ತಿ ಯಾವುದು?

ವಾಯು :– ನನ್ನ ಶಕ್ತಿಯೆ? ನನ್ನಿಂದಲೇ ಈ ಲೋಕದ ಜೀವರಾಶಿಗಳು ಚಲಿಸುವುದು, ನನ್ನಿಂದಲೇ ಈ ಲೋಕದ ಜನಗಳು ಬದುಕಿರುವುದು ತಿಳಿಯಿತೋ ಭೂತವೇ?

ಭೂತ :– ಓಹೊ ಹಾಗೋ! ಸರಿ ಎಲ್ಲಿ ಈ ತೃಣವನ್ನು ಅಲುಗಾಡಿಸು ?

ವಾಯು :– (ನಗುತ್ತಾ) ಈ ತೃಣವನ್ನು ಅಲುಗಾಡಿಸಬೇಕೇ? ಇಗೋ ನೋಡು ... ಅಯ್ಯೋ! ನನ್ನ ಚೈತನ್ಯ ಉಡುಗಿ ಹೋಯ್ತಲ್ಲಾ...ದುರ್ಬಲನಾಗಿ ಬಿಟ್ಟೆನಲ್ಲಾ...ಅಯ್ಯೋ...

ಭೂತ :– ಯಾಕೆ ವಾಯುದೇವ ? ನಾಚಿಕೆ

ಯಿಂದ ತಲೆ ತಗ್ಗಿಸಿ ನಿಂತೆ;... ನಿನ್ನ ಪರಾಕ್ರಮವೇನಾಯಿತು? ಹುಲ್ಲುಕಡ್ಡಿ ಗೂ ಕಡೆಯಾಯಿತೇ...

(ವರುಣ ಪ್ರವೇಶ)

ವರುಣ:— ಹೇ ಪಿಶಾಚಿಯೇ; ಯಾರು ನೀನು?

ಭೂತ :— ನಾನು ಯಾರಾದರಾಗಲಿ...ತಾವು ಯಾರು?

ವರುಣ .— ನಾನು ಮಳೆದೇವ— ಪರ್ಜನ್ಯ

ಭೂತ :— ತಮ್ಮಲ್ಲಿ ಯಾವ ಶಕ್ತಿ ಉಂಟು?

ವರುಣ :— ನನ್ನ ಶಕ್ತಿಯೋ... ನನ್ನ ಜಡಿ ಮಳೆಯಿಂದ ಈ ಪ್ರಪಂಚವನ್ನೇ ಕೊಚ್ಚಿಕೊಂಡು ಹೋಗುವ ಹಾಗೆ ಮಾಡಿಬಿಡುತ್ತೇನೆ ... ತಿಳಿಯಿತೋ...ಭೂತವೇ?

ಭೂತ :— ಅಬ್ಬಾ! ಹಾಗೋ ಸರಿ... ಎಲ್ಲಿ ಈ ಕಡ್ಡಿಯನ್ನು ನಿನ್ನ ಆ ಜಡಿಮಳೆಯಿಂದ ತೋಯಿಸು...

ವರುಣ :— (ನಗುತ್ತಾ) ಈ ತೃಣವನ್ನು ತೋಯಿಸ ಬೇಕೆ ? ... ನೋಡುತ್ತಿರು ... ಹೇಗೆ ಈ ತೃಣ ... ಅಯ್ಯೋ ನನ್ನ ಜಲಶಕ್ತಿ ಇಂಗಿ ಹೋಯ್ತೇ ... ಅಯ್ಯೋ ...

ಭೂತ :— ವರುಣದೇವ ! ಏಕೆ ತಲೆ ತಗ್ಗಿಸಿ ನಿಂತೆ...ಏನಾಯ್ತು ನಿನ್ನ ಶಕ್ತಿ...ಪ್ರತಾಪಗಳು...

( ಇಂದ್ರನ ಪ್ರವೇಶ )

ಇಂದ್ರ:— (ಆಶ್ಚರ್ಯದಿಂದ)ಇದೇನಿದು! ಅಗ್ನಿ, ವಾಯು, ವರುಣರು...ಮಾತಾಡದೆ ತಲೆತಗ್ಗಿಸಿ, ಮೂಕರಂತೆ ನಿಂತಿದ್ದಾರೆ ... ಓಹೋ ! ಈ ಭೂತ ಏನಾದರೂ ಮಾಡಿತೋ ಏನೋ . ಇರಲಿ ... ಈ ಭೂತವನ್ನೆ ಮೊದಲು ವಿಚಾರಿಸಿಕೊಳ್ಳುತ್ತೇನೆ. ಹೇ ಕರಾಳ ಭೂತವೇ! ಯಾರು ನೀನು ?

ಭೂತ — (ನಗುತ್ತ) ನಾನು ... ನಾನೇ ... ನಾನು...ನಾನೇ ; ತಾವು ಯಾರು ?

ಇಂದ್ರ — ( ನಗುತ್ತ ) ನಾನು .. ನಾನು, ಅತಳ, ವಿತಳ, ಪಾತಾಳ, ಸುರ, ಯಕ್ಷ, ಕಿಂಪುರುಷ ಲೋಕಗಳಿಗೆ ಚಕ್ರವರ್ತಿ...ದೇವೇಂದ್ರ... ತಿಳಿಯಿತೋ ಹೇ ಹುಚ್ಚ ಭೂತವೇ ...

ಭೂತ — ಹೌದೇನು!... ತಮ್ಮಶಕ್ತಿ—ಶೌರ್ಯ ಪ್ರತಾಪಗಳೇನು ? ಹೇಳುವಿರಾ...

ಇಂದ್ರ :— ನನ್ನ ಶೌರ್ಯ ಪ್ರತಾಪಗಳೇ ? ... ಕೇಳು ಭೂತ ... ನನ್ನ ಈ ವಜ್ರಾಯುಧದಿಂದ ಇಡೀ ಬ್ರಹ್ಮಾಂಡವನ್ನೆಲ್ಲಾ ಪುಡಿ - ಪುಡಿ ಮಾಡಿಬಿಡುತ್ತೇನೆ...

ಭೂತ :— (ಅಶ್ಚರ್ಯದಿಂದ) ಅಬ್ಬಾ ! ಅಬ್ಬಬ್ಬಾ!! ಎಂಥ ಅದ್ಭುತಶಕ್ತಿ ತಮ್ಮದು ಇಂದ್ರದೇವ ಒಳ್ಳೆಯದು; ಈ ಹುಲುಕಡ್ಡಿಯನ್ನು ತಮ್ಮ ವಜ್ರಾಯುಧದಿಂದ ಪುಡಿ — ಪುಡಿ ಮಾಡಿಬಿಡಿ ಅಷ್ಟೆ ಸಾಕು ನನಗೆ...

ಇಂದ್ರ :— (ನಗುತ್ತಾ)ಈ ಕೇಳು ಕಾರ್ಯವೇ! ನನ್ನ ವಜ್ರಾಯುಧಕ್ಕೆ. ಇರಲಿ, ಈ ಹುಲುಕಡ್ಡಿಯ ನೆಪದಲ್ಲಿ ಇಡೀ ಬ್ರಹ್ಮಾಂಡವನ್ನೇ ತಲೆಕೆಳಕ್ಕಾಗಿ ಮಾಡಿ ತೋರಿಸುತ್ತೇನೆ . ಅಬ್ಬಾ... ಏನು ಭಾರ ಈ ತೃಣ... ಅಯ್ಯೋ ವಜ್ರಾಯುಧವೇ... ಬಾಗುತ್ತಿದೆಯಲ್ಲಾ ... ಮುರಿದು ಹೋಗುವ ಹಾಗೇ ಆಗುತ್ತದೆಯಲ್ಲಾ...ಅಯ್ಯೋ...ಶಕ್ತಿ ಕುಂದುತ್ತಿದೆ ಈ ಭೂತ ಯಾರೋ ತಿಳಿಯದಲ್ಲಾ ... ಅಯ್ಯೋ!...

ನೋಟ — ೩

(ಭೂತ ಮಾಯವಾಗಿ — ಉಮೆಯ ಪ್ರವೇಶ)

ಉಮೆ :— ಏನಿದು! ದೇವತೆಗಳೆಲ್ಲರೂ—ತೇಜೋಹೀನರಾಗಿರುವಿರಿ ಕಾರಣವೇನು ?

ಇಂದ್ರ, ಅಗ್ನಿ, ವರುಣ, ವಾಯು :— (ದುಃಖದಿಂದ) ತಾಯಿ ಪರಮೇಶ್ವರೀ! ದುರ್ಗಾಮಾತಾ! ಒಂದು ಭೂತ—ಬಂದು ನಮ್ಮ ಶಕ್ತಿ—ತೇಜಸ್ಸನ್ನು ಕಾಂತಿಹೀನ ಮಾಡಿತು... ಆ ಭೂತ ಯಾರು ? ತಿಳಿಯಲಿಲ್ಲ ತಾಯೆ...

ಉಮೆ :— (ಚಿಂತಿಸಿ) ದೇವತೆಗಳೇ ! ಆ ಭೂತ ಮತ್ತಾರು ಅಲ್ಲದೆ — ಸಾಕ್ಷಾತ್ ಭೂತರಾಜ — ಪರಮೇಶ್ವರ...ನಿಮ್ಮ ಅಹಂಕಾರ ಎಂಬ ಕತ್ತಲೆಯನ್ನು ಹೋಗಲಾಡಿಸಿ—ದಿವ್ಯ ಜ್ಯೋತಿ ಎಂಬ ಜ್ಞಾನವನ್ನು ದಯಾಪಾಲಿಸಲು ಬಂದ ಚಂದ್ರಶೇಖರ ತಿಳಿಯಿತೇ ... ಆ ದೇವನಲ್ಲಿ ಶರಣಾಗತರಾಗಿ . ನಿಮ್ಮ ಶಕ್ತಿಯನ್ನು ಪುನಃ ಪಡೆಯಿರಿ...

ಇಂದ್ರ, ಅಗ್ನಿ, ವರುಣ, ವಾಯು:— (ಪ್ರಾರ್ಥಿಸುವರು) ಹೇ ಚಂದ್ರಮೌಳೇ !

'ಕರಚರಣಕೃತಂ ವಾ
ಕಾಯಜಂ ಕರ್ಮಜಂ ವಾ ।
ಶ್ರವಣಂ ನಯನಜಂ ವಾ
ಮಾನಸಂ ವಾ ಪರಾಧಂ ॥
ವಿಹಿತಮವಿಹಿತಂ ವಾ
ಸರ್ವಮೇತತ್ ಕ್ಷಮಸ್ವ ।
ಜಯ ಜಯ ಕರುಣಾಬ್ಧೇ
ಶ್ರೀ ಮಹಾದೇವ ಶಂಭೋ ॥'

ರಕ್ಷಮಾಂ...ಪಾಹಿಮಾಂ...ನಮ್ಮ ಪೂರ್ವಶಕ್ತಿ—ತೇಜಸ್ಸನ್ನು ನೀಡು ತಂದೆಯೇ !

ಪರಮೇಶ್ವರ :— (ಪ್ರತ್ಯಕ್ಷವಾಗಿ) ತಥಾಸ್ತು ! ದೇವತೆಗಳೆ, ನಿಮಗೆ ತಿಳಿಯದೇ...'ಅಹಂ ದೂರತಸ್ತೇ ಪಾದಾಂಭೋಜಯುಗ್ಮ' ಎಂದು. ಹಾಗೆಂದರೆ ಯಾವಾಗ ಅಹಂಕಾರ ದೂರವಾಗುವುದೋ-ಆಗ ನನ್ನ ಪಾದ ಕಮಲಾಶ್ರಯ ದೊರೆಯುವುದು; ಅಹಂಕಾರ ಪಡಬೇಡಿ ಅದು ಕತ್ತಲು—ಅಜ್ಞಾನ; ಈ ಕತ್ತಲೆಯನ್ನು ದಾಟಿ ಜ್ಞಾನ ಜ್ಯೋತಿ ಬೆಳಕಿಗೆ ಬನ್ನಿ..ನಿಮ ಗೆಮಂಗಳವಾಗಲಿ...ತಮಸೋಮಾ ಜ್ಯೋರ್ತಿಗಮಯ !!

ಎಲ್ಲರೂ :— ಓಂ...ಪರಮೇಶ್ವರಾಯ
ಸರ್ವ ಲೋಕ ಶರಣ್ಯಾಯ
ಭೂತರೂಪಾಯ ಮಂಗಳಂ

✶

## ಅರಿಕೆ

ಎಲ್ಲಿ ಭಯವಿನಿತಿರದೊ
ಎಲ್ಲಿಯೆದೆ ಕುಂದಿರದೊ
ಎಲ್ಲಿ ಕಾಮಕ್ರೋಧ
ಲೋಭ ಸುಳಿದಿರದೊ
ಎಲ್ಲಿ ಮತ್ಸರ, ಮೋಹ
ಮದಗಳಾತುರ ವಿರದೊ
ಎಲ್ಲಿ ವಂಚನೆ, ಕುಹಕ
ಹೆಡೆಯಾಡದಿಹುದೊ

ಎಲ್ಲಿ ಸತ್ಯದ ಗುಡಿಗೆ
ಧರ್ಮ ಕುಡಿಯಾಗಿಹುದೊ
ಎಲ್ಲಿ 'ಸಹನಾವವತು'
ಮಂತ್ರವಾಗಿಹುದೋ
ಅಲ್ಲಿಯ ಶಾಂತಿಯುತ
ಪ್ರೇಮ ಜೀವನವನದಿ
ಮಲ್ಲಿಗೆಯ ಮುಗುಳಾಗಿ
ಮಾಡೆನ್ನ ಹರಿಯೇ

—ವಿ. ಬಿ. ಅರ್ತಿಕಜೆ

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.
* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲವಂತೆ ಶೌಚ ಗೃಹಗಳು
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ.
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ
* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರ ದಲ್ಲಿ ನೇಮಿಸುವಿಕೆ.
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ. ಶ್ರೀ ವೆಂಕಟೇಶರನ ಉದ್ದಾಮ ಭಕ್ತ, ಕವಿ ಅನ್ನಮಾಚಾರ್ಯರ ಅಂಚೆಚೀಟಿಯನ್ನು ಬಯಸುವವರು ಕೊಂಡುಕೊಳ್ಳಬಹುದು.

# ನಿನ್ನ ಸನ್ನಿಧಿ ಪುಣ್ಯ ಸಂಪದವು



ದೇವ ಜೀವರ ಕಾವ ಕರುಣೆಯ
ನೀನ ಸಿರಿವರ ಲಕ್ಷ್ಮೀ ವಲ್ಲಭ
ನೋವ ನೀಗಿಸಿ ಸಲಹು ವೆಂಕಟರಮಣ ಸಿರಿದೇವ।
ಪಾವನಾತ್ಮನೆ ಪಾಪಭಂಜಕ
ಸಾವಧಾನದಿ ಮೊರೆಯನಾಲಿಸು
ಭಾವಿಸಿರುವೆನು ನಿನ್ನ ಸನ್ನಿಧಿ ಪುಣ್ಯ ಸಂಪದವು ||೧||

ನಿನ್ನ ಸೇವೆಯ ಬಗೆಯು ಬಾರದು
ನಿನ್ನ ನುತಿಸುವ ಪರಿಯನರಿಯೆನು
ನಿನ್ನ ಕೀರುತಿ ಮಾಡಲಾಗದು ಮೂಕನಾಗಿಹೆನು।
ನಿನ್ನ ಕಾಣುವ ನೇತ್ರ ಪಾವನ
ನಿನ್ನ ಕೀರ್ತನೆ ನಿತ್ಯಶ್ರವಣ
ಸನ್ನುತಾಂಗನೆ! ಜನ್ಮಸಾರ್ಥಕ ಬೇರೆ ಬಗೆಯೇಕೆ? ||೨||

ಸಾಗುತಿದೆ ಸಂಸಾರ ನೌಕೆಯು
ತ್ಯಾಗ ವಿರಹಿತ ರಾಗ ತುಂಬಿದ
ಭೋಗ ಸಾಗರದಲ್ಲಿ ಅನುದಿನ ಸ್ವಾರ್ಥಪರಿವೇಷ।
ಈ ಗಹನ ವ್ಯಾಮೋಹ ಬಂಧನ
ನೀಗಲಾರದೆ ತೊಳಲುತಿರುವೆನು
ಬೇಗ ಹರಿಸೋ ಪನ್ನಗೇಶನೇ! ನಿತ್ಯನಿರ್ಮಲನೆ ||೩||

'ಸಪ್ತಗಿರಿ' ಗಳನೇರಲಾರದೆ
ತಪ್ತಗೊಂಡಿದೆ ಜೀವ ಶ್ರೀಶನೆ
ಆಪ್ತನಲ್ಲವೇ ನೀನು? ಭಕ್ತನ ಕೂಗು ಕೇಳಿಸದೆ?
ಸುಪ್ತವಾಗದೆ ಏಕೆ ಸ್ವಾಮಿ
ಪ್ರಾಪ್ತವಾಗದೆ ನಿನ್ನನುಗ್ರಹ?
ದೀಪ್ತಿಕಾಣುವ ದಿವ್ಯ ನೇತ್ರವ ನೀಡು ಸರ್ವೇಶ ||೪

ಮಂಗಳವು ಶ್ರೀ ವೆಂಕಟೇಶಗೆ
ಮಂಗಳವು ಶ್ರೀ 'ಸಿರಿ'ನಿವಾಸಗೆ
ಮಂಗಳವು ಶ್ರೀ ಕ್ಷೇತ್ರ ತಿರುಪತಿವಾಸ ದೇವನಿಗೆ
ಮಂಗಳವು ಕಾರ್ಪಣ್ಯಹರನಿಗೆ
ಮಂಗಳವು ಕೈವಲ್ಯದಾತಗೆ
ಮಂಗಳವು ಕಾರುಣ್ಯಮೂರ್ತಿಯ ಪಾದಪಂಕಜಕೆ ||೫||

**ವೈ. ಜಿ. ಗಿರಿಶಾಸ್ತ್ರಿ**

(12 ನೇ ಪುಟದಿಂದ)
ರೇನು ? ಅವನಾರು ? – ಎಂಬ ಪ್ರಶ್ನೆಗೆ ಡಿವಿಜಿಯವರು ಇಲ್ಲಿ ಮನೋಜ್ಞವಾದ ರೀತಿಯಲ್ಲಿ ವಿವರಣೆ ಕೊಟ್ಟಿದ್ದಾರೆ

ಇಂದ್ರಿಯಗಳೊಳು ಬಾಳಿ ಜೀವ ಪಕ್ವಂ ಗೊಳ್ಳ
ಲಿಂದ್ರಿಯಂಗಳ ಮೀರಿ ಮೇಲೇರಿ ಜಾಣಿಂ
ದಿಂದ್ರಿಯಂಗಳನಾಳಿ ಲೋಕವಂ ಸಂತಯಿಪ
ಬಂಧು ಜೀವನ್ಮುಕ್ತ – ಮಂಕುತಿಮ್ಮ ॥

ಈ ಪುಟ್ಟ ಕವಿತೆಯ ಬಗ್ಗೆ ಯೋಚಿಸಿದಷ್ಟು ವಿಚಾರಸಾಗರವೇ ಇಲ್ಲಡಕವಾ'ದೆಂದು ಭಾಸವಾಗುತ್ತದೆ. ಇಂದ್ರಿಯಗಳು ನಮಗೆ ಶತ್ರುಗಳೂ ಅಲ್ಲ, ಮಿತ್ರರೂ ಅಲ್ಲ ಅವು ಕೇವಲ ಉಪಕರಣಗಳು ಮಾತ್ರ. ಅವನ್ನು ಉಪಯೋಗ ಮಾಡಿಕೊಳ್ಳುವುದರಲ್ಲಿ ತುಂಬ ಎಚ್ಚರವಾಗಿರಬೇಕೆಂಬುದು ಹಿರಿಯರ ಅಭಿಪ್ರಾಯ. ಜಿತೇಂದ್ರಿಯರಾಗಬೇಕೇ ವಿನಾ ಗತೇಂದ್ರಿಯರಾಗಬಾರದು. ಅವುಗಳ ಜತೆಯಲ್ಲೇ ಬಾಳಬೇಕು. ಕ್ರಮೇಣ ಇಂದ್ರಿಯಗಳ ಆಕರ್ಷಣೆ – ಪ್ರಲೋಭನೆಗಳನ್ನು ಮೀರಿ ಮೇಲೇರಬೇಕು. ಕೊನೆಗೆ ಅವುಗಳನ್ನು ಅಡಿಯಾಳುಗಳಾಗಿಟ್ಟುಕೊಂಡು ನಾವು ಆಳುವ ದೊರೆಗಳಾಗಬೇಕು. ಅವುಗಳ ಅಂಕೆಯಲ್ಲಿ ನಾವಿರುವುದು ಸಾವು ಅವು ನಮ್ಮ ಅಂಕೆಯಲ್ಲಿರುವುದು ಬಾಳು ಈ ರಹಸ್ಯವನ್ನರಿತು ಬಾಳುವವನು ಜೀವನ್ಮುಕ್ತ. "ಅನ್ಯಸ್ತ್ಯಾಗೀ ಬಹಿಃ ಸಂಗೀ ಲೋಕೇ ವಿಚಾರ ರಾಘವ"– ಎಂದು ಯೋಗವಾಸಿಷ್ಠ ಹೇಳುತ್ತದೆ. ಜಗನ್ನಾಟಕದಲ್ಲಿ ಎಲ್ಲ ಜೀವಿಗಳೂ ಪಾತ್ರಧಾರಿಗಳೇ. ತಂತಮ್ಮ ಪಾತ್ರವನ್ನು ಸೂಕ್ತವಾಗಿ ನಿರ್ವಹಿಸಲೇಬೇಕು. ಆದರೆ ರಂಗದ ಮೇಲೆ ಕುಣಿದು ಕುಪ್ಪಳಿಸಿದ ಮೇಲೆ ನಟನಿಗೆ ವಿಶ್ರಾಂತಿ ಬೇಕೇ ಬೇಕು

"ಮಹಿಯ ನಾಟಕದಿ ನಿಂ ಮನಸಿಟ್ಟು ಕುಣಿ
ಕುಣಿದು
ವಿಹರಿಸಾತ್ಮಾಲಯದಿ – ಮಂಕುತಿಮ್ಮ ॥

ಮಾಗಿದ ಹಣ್ಣು ತಾನಾಗಿ ಉದುರಿ ಬೀಳುವುದು ; ಮಲಗಿಕೊಂಡು ಓದುತ್ತಿರುವಾಗ–ನಿದ್ದೆ ಬಂದಾಗ ಕೈಲಿದ್ದ ಪುಸ್ತಕ ತಾನಾಗಿ ಬಿದ್ದು ಹೋಗುವುದು ಎಲ್ಲರ ಅನುಭವಕ್ಕೂ ಬಂದಿರುವ–ಎಲ್ಲರೂ ಕಂಡಿರುವ ಸಂಗತಿ. ಬಹುಶಃ ಇದೇ ರೀತಿಯಲ್ಲಿ ಬಾಳು ಮಾಗಿದಂತೆಲ್ಲ ಜಗದ ಸಂಬಂಧಗಳು ತಾನಾಗಿ ಕಳಚಿ ಹೋಗುತ್ತದೆ.

ಇಳೆಯ ಸಂಬಂಧಗಳು ಸಂಕಲ್ಪ ನಿಯಮಗಳು
ಸಡಿಲುವುವು ಬಾಳ್‌ಮಾಗೆ – ಮಂಕುತಿಮ್ಮ ॥

ಯಾವುದೇ ವ್ಯಕ್ತಿಯಾಗಲಿ ಜ್ಞಾನಿಯಾಗುವುದು ಎಂದು? ಹೇಗೆ? ಜಗಜ್ಜೀವನದ ರಹಸ್ಯವನ್ನರಿಯುವುದರಮೂಲಕ ದ್ವೈತಭಾವವಳಿಸಿಹೋದಂದು. ಆದರೆ ದ್ವಂದ್ವಾತ್ಮಕವಾದ ಈ ಜಗತ್ತಿನಲ್ಲಿ ಸಂಘರ್ಷ ತಪ್ಪಿದ್ದೆಂದು ? ಏನೋ ಗಲಭೆ – ಅಶಾಂತಿ ಇಲ್ಲಿ ನಿರಂತರ ವ್ಯಾಪಾರ 'ಸೊಗ ಜಗಕೆ ರಣರಂಗ' ಭಾವಶುದ್ಧಿ ಇಲ್ಲದ್ದರ ಫಲವಿದು

'ಒಡೆಯದಿರು ತಳಹದಿಯ' – ಎಚ್ಚರಿಕೆ ಕೊಡುತ್ತ ಡಿವಿಜಿಯವರು ಆರ್ಷೇಯ ಸಂಪ್ರದಾಯಗಳ ಮಹತ್ವವನ್ನು ಕುರಿತು ಈ ಗ್ರಂಥದಲ್ಲಿ ಸಾಕಷ್ಟು ಚರ್ಚೆ ಮಾಡಿದ್ದಾರೆ. ಜಗತ್ತನ್ನು ತಿದ್ದಲು ಸಾಧ್ಯವಿಲ್ಲ ಹಾಗೆಂದುಕೊಂಡು ಸುಮ್ಮನೆ ಕೂತಿರಲೂ ಕೆಲವರಿಗೆ ಸಾಧ್ಯವಿಲ್ಲ. ಭೀಮ ಭೂರುಹದ ವಕ್ರವಕ್ರವಾದ ರೆಂಬೆಗಳನ್ನು ನೆಟ್ಟಗೆ ಮಾಡಲು ಯಾರಿಗೂ ಸಾಧ್ಯವಿಲ್ಲ ಅದಿರುವಂತೆಯೇ ನೋಡಿ ಆನಂದ ಪಡುವುದು ; ಆ ರೆಂಬೆಗಳ ನೆರಳಿನಲ್ಲೇ ವಿಶ್ರಮಿಸಿಕೊಳ್ಳುವುದು ಸೂಕ್ತ ಹಾಗೇ ಜಗತ್ತು ಕೂಡ ಜಗತ್ತಿನಲ್ಲಿ ಪರಂಪರಾನುಗತವಾಗಿ ಬೆಳೆದು ಬಂದ ಹಲವಾರು ನಂಬಿಕೆಗಳು ಸಂಪ್ರದಾಯಗಳು ಇವೆ ಇಂದಿನ ಜನ ಅವನ್ನು ಆಕ್ಷೇಪಿಸಬಹುದು; ಅಂಧಗತಿ ಎನ್ನಬಹುದು – ಮೂಢನಂಬಿಕೆ ಎಂದು ಉಪೇಕ್ಷಿಸ್ಯಮಾಡಬಹುದು. ಆದರೆ ಅದು ಜಗತ್ತೆಂಬ ವೃಕ್ಷಕ್ಕೆ ನೂರಾರುವರ್ಷಗಳಿಂದ ಪೋಷಕ ಸಾಮಗ್ರಿಯನ್ನೊದಗಿಸಿ ಸುಪುಷ್ಟವಾಗಿ ಬೆಳೆಸಿದೆ – ಎಂಬುದಂತೂ ಸತ್ಯ – ಅದನ್ನೂ ಯಾರೂ ಅಲ್ಲಗಳೆಯುವಂತಿಲ್ಲ

ನ ಬುದ್ಧಿ ಭೇದಂ ಜನಯೇದಜ್ಞಾನಾಂ
ಕರ್ಮಸಂಗಿನಾಮ್;
ತಾನ್ ಅಕೃತ್ಸ್ನ ವಿದೋಮಂದಾನ್
ಕೃತ್ಸ್ನವಿನ್ನವಿಚಾಲಯೇತ್...

ಮುಂತಾದ ಗೀತಾ ವಾಕ್ಯಗಳನ್ನಿಲ್ಲಿ ಸ್ಮರಿಸಿಕೊಳ್ಳಬೇಕು. ತಾನು ತುಂಬ ಬುದ್ಧಿವಂತನೆಂಬ ಅಹಂಕಾರದಿಂದಲೋ ಅಥವ ಕೀರ್ತಿಕಾಮನೆಯ ಪ್ರಬಲ ಆಕರ್ಷಣೆಯ ಕಾರಣಕ್ಕೋ ಜಗತ್ತಿಗೆ ಮಾರ್ಗದರ್ಶನ ಮಾಡಬಯಸುವ ಸುಧಾರಕ ವರ್ಗಕ್ಕೆ ಇಲ್ಲಿ ಡಿವಿಜಿಯವರು ಒಂದು ಎಚ್ಚರಿಕೆ ನೀಡಿದ್ದಾರೆ – ಸಲಹೆಯ ರೂಪದಲ್ಲಿ.

"ದುಡುಕದಿರು ತಿದ್ದಿ ಕೆಗೆ; ಸಲ್ಲವಾತುರತೆಯದಕೆ"

ನೂರಾರು ವರ್ಷಗಳಿಂದ ನಿಯತಿಯ ನಿಯಮದಂತೆ ಒಂದು ನಿರ್ದಿಷ್ಟ ದಿಕ್ಕಿನಲ್ಲಿ ಹರಿಯುತ್ತಿರುವ ನದಿಯ ಪ್ರವಾಹವನ್ನು ಬೇರೊಂದು ದಿಕ್ಕಿಗೆ ತಿರುಗಿಸ ಬೇಕಾದ ಅಗತ್ಯವಾದರೂ ಏನು ? ಅದೆಷ್ಟು ಶ್ರಮದ ಕೆಲಸ? ಪ್ರಯೋಜನವಾದರೂ ಏನಿದೆ ? ಹಾಗೇನೇ ಬಲು ಹಳೆಯ ಲೋಕವಿದು, ಬಲು ಪುರಾತನ ಲೋಕ–ಬೆಳೆದಿರ್ಪುದದು ಕೋಟಿರಸಗಳ ಪೀರ್ದು – ಸುಲಭವಲ್ಲಿದರ ಸ್ವಭಾವವನು ಮಾರ್ಪಡಿಸೆ, ಇರುವ ಸುಖಸಂತೋಷವನ್ನು ಹತಗೊಳಿಸಿ ಬೇರೊಂದು ಸುಖಸಂತೋಷ ಕೊಡುತ್ತೇನೆಂಬುದು ಶುದ್ಧ ಅವಿವೇಕ. ನಮ್ಮ ಪೂರ್ವಿಕರೇನೂ ದಡ್ಡರಾಗಿರಲಿಲ್ಲ.

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ–517507
ಚಿತ್ತೂರು ಜಿಲ್ಲೆ, ಆಂ. ಪ್ರ.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು ಸೋಮ, ಮಂಗಳ, ಬುಧ ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5–00 ಪ್ರಾ 5–30 | ಪ್ರಾ 5–00 ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 ಪ್ರಾ 6–00 | ಪ್ರಾ 5–30 ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 ಪ್ರಾ 6–30 | ಪ್ರಾ 6–00 ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 ಪ್ರಾ 7–00 | ಪ್ರಾ 6–30 ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 ಪ್ರಾ 7–30 | ಪ್ರಾ 7–00 ಪ್ರಾ 7–30 |
| ಸರ್ವದರ್ಶನ | ಪ್ರಾ 7–30 ಪ್ರಾ 10–00 | ಅಭಿಷೇಕ ಪ್ರಾ 7–30 ಪ್ರಾ 8–30 |
| | | ಸಮರ್ಪಣ ಪ್ರಾ 8–30 ಪ್ರಾ 9–30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10–00 ಪ್ರಾ 10–30 | ಪ್ರಾ 9–30 ಪ್ರಾ 10–30 |
| *ಅರ್ಜಿತ ಕಲ್ಯಾಣೋತ್ಸವ | ಪ್ರಾ 10–30 ಮ 12–00 | ಪ್ರಾ 10–30 ಮ 12–00 |
| ಸರ್ವದರ್ಶನ | ಪ್ರಾ 10–30 ಸಂ 6–30 | ಪ್ರಾ 10–30 ಸಂ 6–30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6–30 ರಾ 7–00 | ಸಂ 6–30 ರಾ 7–00 |
| ಸರ್ವದರ್ಶನ | ರಾ 7–00 ರಾ 8–45 | ರಾ 7–00 ರಾ 8–45 |
| ಏಕಾಂತ ಸೇವೆ | ರಾ 8–45 ರಾ 9–00 | ರಾ 8–45 ರಾ 9–00 |

| | |
|---|---|
| *ಅರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಮೋಹ – ಕರುಣೆ – ಶಾಂತಿ ಈ ಮೂರು ಮನೋ ಭಾವನೆಗಳು ಸೌಂದರ್ಯದ ಮೂರು ಭಿನ್ನ ರೂಪಗಳು. ಬಹುಶಃ ಅನಂತ ಸೌಂದರ್ಯದ ಸಂಕ್ಷಿಪ್ತವಾದ – ಸಾರಭೂತವಾದ ರೂಪಗಳು. ಮೋಹವು ಕರುಣೆಯನ್ನು ಕರುಣೆ ಶಾಂತಿಯನ್ನು ಬೆಳಸಿದಾಗ, ಒಂದು ಇನ್ನೊಂದರ ಹುಟ್ಟಿಗೆ ಕಾರಣವಾದಾಗ – ವ್ಯಕ್ತಿಯ ಬಾಳು ಸಫಲವಾದೀತು. ಸುಂದರವಾದುದನ್ನು ಕಂಡಾಗ ಸಂತೋಷವಾಗುತ್ತದೆ ದೊರೆತದ್ದನ್ನೇ ಸುಂದರವೆಂದು ಭಾವಿಸಿದಾಗ ತೃಪ್ತಿಯಾಗುತ್ತದೆ. ಸಂತೋಷ ತೃಪ್ತಿ–ಇವು ಒಂದೇ ನಾಣ್ಯದ ಎರಡು ಮುಖಗಳು

ಕರಾಳಕಾರಾಗೃಹದಲ್ಲಿ ಬಂದಿಯಾಗಿರುವವನು ಮೇಲಿರುವ ಪುಟ್ಟ ಗವಾಕ್ಷಿಯ ಮೂಲಕ ಅನಂತವಾದ ಗಗನವನ್ನು–ಉಲ್ಲಾಸಕರವಾದ ಗಾಳಿಬೆಳಕನ್ನು ಪಡೆಯಬೇಕಷ್ಟೆ. ಅದೇರೀತಿ ಜಗದ ಬಂದೀಖಾನೆಯಲ್ಲಿರುವ ನಾವು ಸತ್ಕಾವ್ಯ, ಸತ್ಕಲೆ–ಸಚ್ಛಾಸ್ತ್ರ–ವೆಂಬ ಗವಾಕ್ಷಿಗಳ ಮೂಲಕ ಆಗಾಗ ಅನಂತ ಸೌಂದರ್ಯ–ಅನಂತಶಾಂತಿ–ಅನಂತಆನಂದವನ್ನು ಪಡೆದುಕೊಳ್ಳಬೇಕು.

ಧೀವಿವೇಕದಿಂದ ನಾವು ಮಾನಸಿಕ ಸಮತೋಲನವನ್ನು ಪಡೆದಿದ್ದರೆ ಸಾಕು–ಭಾವರಾಗೋದ್ರೇಕವೇನೂ ಮಾಡಲಾರದು. ಜಗದೆಲ್ಲ ಸಾಹಸಕ್ಕೆ ಜನರೆಲ್ಲ ಪ್ರಯತ್ನಕ್ಕೆ ಮೂಲಕಾರಣವಾದದ್ದು ಎರಡಂಶಗಳು – ಹೊಟ್ಟೆಯಲಿ ಹಸಿವು–ಮನದಲಿ ಮಮತೆ. ಈ ಎರಡೂ ಸೃಷ್ಟಿಯಂತ್ರದ ಗುಟ್ಟು – ಕೀಲುಗಳು. ಜಗತ್ತಿನಲ್ಲಿ ಈ ಎರಡಂಶಗಳು ಏನೇನು ಕಾರ್ಯಮಾಡಿಸಿವೆ.!!

ಇಂತಹ ನೂರಾರು ಚಿನ್ತನ ಮಂಥನಗಳು "ಕಗ್ಗ"ದಲ್ಲಿವೆ ಡಿ ವಿ. ಜಿ.ಯವರು ತಮ್ಮ ಅನುಭವದಿಂದ ಬರೆದಿರುವ ಈ ಗ್ರಂಥದ ಒಂದು ಪದ್ಯವನ್ನು–ಅದು ಸಂದರ್ಭೋಚಿತವಾಗಿರುವುದರಿಂದ–ಇಲ್ಲಿ ಉಲ್ಲೇಖಿಸುವುದು ಅಪ್ರಾಸಂಗಿಕವಾಗಲಾರದು.

ಸರಕಾರ ಹರಿಗೋಲು–ತೆರೆಸುಳಿಗಳತ್ತಿತ್ತ
ಸುರೆ ಗುಡಿದವರು ಕೆಲರು ಹುಟ್ಟು ಹಾಕುವರು
ಬಿರುಗಾಳಿ ಬೀಸುವುದು ಜನವೆದ್ದು
ಕುಣಿಯುವುದು
ಉರುಳದಿಹುದ ಚ್ಚರಿಯೇ–ಮಂಕುತಿಮ್ಮ ||

"ಮಂಕುತಿಮ್ಮನ ಕಗ್ಗ" – ಕನ್ನಡಸಾಹಿತ್ಯದ "ಸಮಯೋಚಿತಪದ್ಯಮಾಲಿಕೆ". ಈ ಗ್ರಂಥ ನೀಡಿಹೋದ ಶ್ರೀದೇವನಹಳ್ಳಿ ವೆಂಕಟರಮಣಯ್ಯ ಗುಂಡಪ್ಪನವರ ಪುಣ್ಯಸ್ಮೃತಿಗೆ ಕೋಟಿಕೋಟಿ ನಮಸ್ಕಾರಗಳು.



# ಉದಯರಾಗ



೧

ಗಗನ ಚುಂಬಿಸ ಆ ನಿನ್ನ ಶಿಖರ
ಇರುಳಲಿ ಶೋಭಿಸ ಶುಕ್ರನ್ ನೆಲೆ
ಮೂಡಲಲಿ ಮುಂಜಾನೆ ಮೂಡಲು
ತೆಳ್ಳನೆ ಶುಚಿಯಾದ ಕೆಂಪು ಹರಿಯಲು
ನೋಡು! ಎಂತು ಸಾಗುವನಾ ತಾರೆ!
ಹದಿಬದೆ ಆಲಿಂಗನದಿಂ ಜಾರುವಂತೆ!
ಆ ಉದಯ ರಾಗದಿ ಸ್ಪರ್ಧಿಸಲಾರದೆ
ಅಡಿಗೆಟ್ಟ ಜವ್ವನೆ ಂತೆ ಸಾಗುವನು ॥

೨

ಈ ನಿನ್ನ ಹೊಕ್ಕಳು ಪಾಪ ತೊಳೆವ
ಸಂಜೀವಿನಿಯು ನಿರಂತರ ಚಿಲುಮೆ ।
ಭೋರ್ಗರೆದು ಪಾತಾಳಕ್ಕೆ ದುಮ್ಮಿಕ್ಕಿ
ಜಿಗಿವ ಈ ಪ್ರಶಾಂತ ನೀರಿನೆಡೆ
ಕಿಕ್ಕಿರಿದು ನಿಂದು ಹರಿಲೀಲೆಯನಾಲಿಸುವ
ಮಿತಿಮೀರಿದ ಯಾತ್ರಿಕರ ತವರು ।
ಪಾವನ ಈ ನಿನ್ನ ಸ್ನಾನದ ಒಡ್ಡು
ಈ ಕಪಿಲೇಶ್ವರನ ತೀರ್ಥ ಕಟ್ಟೆ

೩

ನಾ ಹತ್ತಿರ ಬಂದಂತೆಲ್ಲಾ ಎತ್ತರ ಬೆಳೆವ ನೀನು
ಸವಿಯಲು ಸಿಲ್ಕದ ಆಶೆಗಳ ಉತ್ತುಂಗ ಮೊನೆ ।
ನಿನ್ನ ನಿಲುವಿನ ಧಾಟಿಯೋ
ಭಕ್ತರನು ನಿನ್ನೆಡೆಗೆ ಸೆಳೆವ ಸೂಜಿಗಲ್ಲು
ಏಳು ಮುಕುಂದ! ಏಳು ಗೋವಿಂದ! ಏಳು!
ಶ್ರೀ ಭೂದೇವಿಯರು ಕಣ್ತೆರೆಯಾದರು
ಎದ್ದು ಸ್ವೀಕರಿಸು ಈ ಪಾಪಿಯ ಪಾದಸೇವೆ ॥

೪

ಕೆಳಗೆ ಈ ನನಗೆ ನಿನ್ನ ಮಂದಿರ
ಮೇಲೆ ಆ ನಿನಗೆ ಮುಗಿಲ ಪಂದರ
ಬಿಗಿದ ನಿನ್ನ ಆ ಟೊಂಕದ ಸುತ್ತಲೂ
ಲವಲವಿಸುವ ಎಳೆ ಹಸಿರಿನ ಪ್ರಾಕಾರ
ವಿಶ್ವರೂಪದ ಪಡಿಯಚ್ಚಾದ ನಿನ್ನ ಈ ಉದರ
ಬಸಿರಾದ ಅನಾಥ ಆಕಳಿಗೆ ಚಾವಡಿ
ಹುವ್ವೇನು! ಕಾಯೇನು! ಕಡ್ಡಿಯೇನು!
ಈ ಬಟ್ಟೆತಲೆಯುವನ ಅನರ್ಘ ಸಂಭ್ರಮ
ಏಳು! ಸ್ವೀಕರಿಸು ನನ್ನೀ ಕೊಡುಗೆ
ಘನಮನದಿ ಒಯ್ದು ಈ ಲಘು ಕಳಿಗೆ ||

## ಡಾ || ಹೆ. ಶಾ. ವಿಶ್ವೇಶ್ವರಯ್ಯ

೫

ತಂಗಾಳಿ ತರುತಿದೆ ಗೋವಿಂದನಾದಲಹರಿ
ಉಲ್ಬಣದಿ ಹರಿವ ನಿನ್ನ ಅನುರಾಗಲಹರಿ
ಮೂಕರಿಗೆ ಮಾತಿತ್ತ ಕಿವುಡರಿಗೆ ಕಿವಿಯಿತ್ತ
ಅಗಣಿತ ಓಂಕಾರ ನಾಮನಾದಲಹರಿ
ಕಿರಿಯರಿಗೆ ಗತಿಯಿತ್ತ ಹಿರಿಯರಿಗೆ ಬಲವಿತ್ತ
ಊನರಿಗೆ ಕಾಲಿತ್ತ ವಿಸ್ಮಯ ಮಹಾತ್ಮನೆ
ಬಡವ ಬಲ್ಲಿದರಿಗೆ ಮನವಿತ್ತು ಕರೆದ ನೀನು
ಏಳು! ಉದಯ ಭಾನುವೆ! ಏಳು!
ಎದ್ದು ಆಲಿಸು, ಈ ದೀನನ ಮನವಿ
ಬಾಳದಿನದಿ ಒಚ್ಚಿಟ್ಟ ಈ ಗುಟ್ಟನು
ಬೆಂದ ಮನಕಿಂದು ಅತಿ ತ್ವರದಿ
ಆದರ್ಶ ಹರಕೆ ನೀಡಿ ಪಾವನಗೊಳಿಸು ||

೬

ನೀ ಆಡಿದ ಮಾತಿನ ಮಾಡಿದ ಮಾಟದ ದ್ವಂದ್ವಾರ್ಥ
ನಿನ್ನ ಏಳುಹೆಡೆಯ ಹಾವಿನ ಸೀಳುನಾಲಿಗೆಯಂತೆ
ನಿನ್ನ ಸುಲಲಿತ ಅನುರಾಗ ಪ್ರದರ್ಶನವೋ
ನನ್ನ ಅಂತರಾತ್ಮದ ಪ್ರತಿಬಿಂಬವೆಂಬ ಸಂದೇಹ
ಅಂತೆಯೇ ನಿನ್ನ ಶಿಷ್ಯ ಪ್ರೇಮಧೋರಣೆಯ ವಿಶ್ವರೂಪ
ಕಣ್ಮುಚ್ಚಿದರೆ ಕಾಣುವ ಕಣ್ಮಣಿಯು
ತಾಳಲಾರೆ ನೀ ಮುಂಜಾನೆಯಗಲಿಕೆ
ಪ್ರೇಮದಿ ನನ್ನಲಿ ಬೆರೆತು ಈ ಕೂಪದಿಂ
ಹೊರಹಾಕು
ಏಳು! ಎದ್ದು ಕಿರಣಗಳ ಹರಡಿ ಆಶೀರ್ವದಿಸು
ನಿನ್ನನ್ನೇ ನಂಬಿ ಅಗಲಿ ಬಳಲಿದ ಈ ಸೇವಕನ ||

೭

ಏನು ಮೋಡಿ! ಏನು ಮೋದ! ಏನು ಮೋಹ!
ನಾ ಚಿತ್ರಿಸಿದ ಶಿಲೆಯಲಿ ಕಂಡ ನಿನ್ನತನ!
ಉತ್ತರದಕ್ಷಿಣ ಧ್ರುವದಲ್ಲಿಲ್ಲದ ಆ ನೀನು
ಈ ನೆಲೆಯಲಿ, ಈ ಗೂಡುಗಳ ಗೂಡಿನಲ್ಲಿ!
ಬಿಸಿಲೆನದೆ ಮಳೆಯೆನದೆ ಗಾಳಿಯೆನದೆ
ಊರಿನ ಕೇರಿಕೇರಿ ಸುತ್ತಿ ಅರಸಿದೆನು
ಹಗಲೆನದೆ ಇರುಳೆನದೆ ಹಾಳೆಗಳ ತಿರುವಿ
ತಿರುವಿ ಮಗುಚಿ ಕಂಡ ನಿನ್ನ ಚಿತ್ರಮೂರ್ತಿ
ಎಂತುಬಣ್ಣಿಸಲಿ ನಿನ್ನ ಚಿತ್ರವಿಚಿತ್ರವನು!
ಎಂತು ಚಿತ್ರಿಸಿಕೊಂಡು ನೋಡಲಿ, ಈ ನಿನ್ನ ನನ್ನತನ
ನಿರಂತರವಾಗಿ ಎದ್ದಿರುವ ಆ ನಿನ್ನನು
ಬಹುಕಾಲ ಮಲಗಿದ್ದ ಈ ಆಲಸಿನಾನು
ಮಾಯಾ ಪಂಜರದಲಿಟ್ಟು ಮಲಗಿಸಿದೆ
ಅದೇ ಆ ಮೇಲಿನ ಊಹಾಜಾಲದಲಿ ತೂಗಿದೆ
ಏಳು ಮುಕುಂದ! ಏಳು ಗೋವಿಂದ! ಏಳು! ಎದ್ದು
ನೋಡು
ರಾತ್ರಿಯಲಿ ಅರಳಿದ ಈ ಸೇವಕ ಮಲ್ಲಿಗೆಯನು ||

# ಯುವವಾಣಿ

# ಕುಮಾರವ್ಯಾಸನ ಕೃಷ್ಣ



By C V RamanaReddy

ಮಹರ್ಷಿ ವ್ಯಾಸರ ಭಾರತವನ್ನು ಪಂಪಭಾರತವನ್ನೂ ಓದಿಯೇ ಇಲ್ಲವೆನ್ನು ವಷ್ಟರ ಮಟ್ಟಿಗೆ ತನ್ನ ಪ್ರತಿಬಾಧೀದಿತಿಯಿಂದ ಕನ್ನಡಿಸಿ "ಕರ್ಣಾಟಿಕ ಭಾರತ ಕಥಾ ಮಂಜರಿ" ಯನ್ನು ನೂತನ ಕಾವ್ಯವಾಗಿ ಸೃಜಿಸಿರುವನು ಗದುಗಿನ ಗಂಡುಕವಿ ಕುಮಾರವ್ಯಾಸ. ವೇದವ್ಯಾಸರ ಪ್ರೇಮ ಕುಮಾರನಾದ ಈತ "ವೀರನಾರಾಯಣನೆ ಕವಿ ಲಿಪಿಕಾರ ಕುಮಾರವ್ಯಾಸ" ಎಂದು ವಿನಮ್ರಭಾವದಿಂದ ನುಡಿದು ತನ್ನ ಕಾವ್ಯದ ಉಸಿರು, ಹೆಸರು, ಸರ್ವಸ್ವವೂ ಶ್ರೀಕೃಷ್ಣನೇ ಎಂದಿದ್ದಾನೆ. ಆದ್ದರಿಂದಲೇ ಈತ–

ತಿಳಿಯ ಹೇಳುವೆ ಕೃಷ್ಣ ಕಥೆಯನು
ಇಳೆಯ ಜಾಣರು ಮೆಚ್ಚುವಂತಿರೆ
ನೆಲೆಗೆ ಪಂಚಮ ಶ್ರುತಿಯನೊರೆವನು
ಕೃಷ್ಣ ಮೆಚ್ಚಲಿಕೆ
ಹಲವು ಜನ್ಮದ ಪಾಪರಾಶಿಯು
ತೊಳೆವ ಜಲವಿದು ಶ್ರೀಮದಾಗಮ
ಕುಲಕೆ ನಾಯಕ ಭಾರತಾಕೃತಿ
ಪಂಚಮ ಶ್ರುತಿಯ

ಎಂದೇ ಕಾವ್ಯವನ್ನು ಪ್ರಾರಂಭಿಸುತ್ತಾನೆ. ಇದು ಸಕಲ ಶಾಸ್ತ್ರದ ತಿರುಳು ಜನ್ಮ ಜನ್ಮದ ಪಾಪರಾಶಿಯನ್ನು ಸುಡುವ ಜಾತವೇದ. ದ್ವಾಪರ ಯುಗವನ್ನು ನಡೆಸಿದವ ಕೃಷ್ಣ; ಐದನೆಯ ವೇದವನ್ನು ನುಡಿದವನೂ ಅವನೇ. ಶ್ರೀಕೃಷ್ಣನೇ ಕಾವ್ಯದ ಕಥಾನಾಯಕ, ಆತನೇ ಇಡಿ ಭಾರತದ ಪ್ರೇರಕ, ಪ್ರಬೋಧಕ ಮತ್ತು ಕಾರಕಶಕ್ತಿಯಾಗಿದ್ದಾನೆ. 'ನರ ನಾಟಕವ ತಾನೇ ನಟಿಸಿ ತೋರಿಸುವ ಸೂತ್ರದಾರಿ' ಆತ. ಕವಿಯ ಶಕ್ತಿ, ಯುಕ್ತಿ ಗಮನ, ಗರ್ವ. ಚಿತ್ತ, ಚಾತುರ್ಯ, ಅರಿವು, ಆತ್ಮವೆಲ್ಲವನ್ನೂ ಸೆಳೆದಿರುವ ವಿಷಯ ಶ್ರೀಕೃಷ್ಣ. ಅವನೇ ಕನ್ನಡ ಭಾರತದ ನಾಯಕ, ವಸ್ತು, ಜೀವ, ಸೊಬಗು, ಸ್ವಾಮಿ, ಸ್ವಾರಸ್ಯ.

ಇದು ವಿಚಾರಿಸೆ ಬರಿಯ ತೊಳಸಿಯ
ಉದಕದಂತಿರೆ ಇಲ್ಲಿ ನೋಳ್ಪುದು
ಪದುಮನಾಭನ ಮಹಿಮೆ ವಿಚಾರ
ಮಾತ್ರವನು

ದೇವರ ತೀರ್ಥ ತೆಗೆದು ಕೊಳ್ಳುವವನು ಅದನ್ನು ವಿಷ್ಣು ಪಾದೋದಕ ಎಂದು ಭಾವಿಸಿಕೊಂಡು ಕುಡಿಯುತ್ತಾನೆ. ಆ ಭಾವನೆಯೇ ಅವನಿಗೆ ಪರಮ ಮಂಗಳವನ್ನು ಉಂಟುಮಾಡುತ್ತದೆ. ಹಾಗೆ ಈ ಭಾರತ ಕಥೆ ಕೇವಲ ತುಳಸಿಯ ಉದಕದ ಹಾಗೆ ಕಂಡು ಇಲ್ಲಿ ಭಾವಿಸಬೇಕಾದದ್ದು ಪದುಮನಾಭನ ಮಹಿಮೆಯನ್ನು. ಕುಮಾರವ್ಯಾಸನಿಗೆ ಭಾರತವು ಕೃಷ್ಣರಾಯನ ಕಥೆ. ಕೌರವರು, ಪಾಂಡವರು–ಅವರ ನಡುವೆ ದಾಯಾದಿ ಕಲಹ, ಘೋರವಾದ ಕುರುಕ್ಷೇತ್ರ ರಣಭೂಮಿ, ಸೇನೆಗಳ ನಿರ್ನಾಮ–ಈ ಸಮುಸ್ತವೂ ಕೃಷ್ಣನ ಲೀಲೆ. ಅವನ ಕೈಗೆ ಸಿಕ್ಕಿದ ಸೂತ್ರದ ಬೊಂಬೆಗಳ ಕುಣಿತ ಈ ಕಥೆ.

ಈ ಕೃಷ್ಣನಾರು? ಅವನ ವ್ಯಕ್ತಿತ್ವ ಧೀಶಕ್ತಿ ಕ್ರಿಯಾಶಕ್ತಿಗಳಿಗೆ ಆವ ಬಣ್ಣ? ಅವನಿಗೂ ಮನುಷ್ಯರಿಗೂ ಸಂಬಂಧ ಸರಪಣಿ ಯಾವ ಲೋಹದ್ದು? ಎಂದರೆ– ದ್ರೌಪದಿಯ ಸ್ವಯಂವರ ಕಾಲದಲ್ಲಿ ಪ್ರತ್ಯಕ್ಷವಾಗಿ ಪಂಚ ಪಾಂಡವರಿಗೆ "ಅಂತರ್ಜೀವ ಪ್ರಾಣಾದಿ ಪಂಚವಾಯುಗಳಾದ ನಿಮ್ಮೈವರಿಗೆ" ಎಂದು ಅಭಯ ಪ್ರಧಾನಮಾಡಿದ ಈ ಶ್ರೀಕೃಷ್ಣನು ಮಹಾವಿಷ್ಣುವಿನ ಅವತಾರ. 'ಭಾರ ಹೆಚ್ಚಿದೊಡೊರಲಿ ಧರಣೀನಾರಿ ಭಿನ್ನಹ' ಮಾಡಿದುದಕ್ಕಾಗಿ ಅವತಾರ ಮಾಡಿದವನು. ದುಷ್ಟ ನಿಗ್ರಹ ಶಿಷ್ಟ ಪರಿಪಾಲನೆಯ ಕಾರ್ಯಕ್ಕಾಗಿ ಭಜಕರ ಪಾಂಡವರ ಬೆಂಬಳಿಯಲ್ಲಿ ನಿರತವನು. 'ಬಂಟರಾವ್ ಭಕ್ತರಿಗೆ, ನೆನೆವರು ನೆಂಟರು ಎಮಗೊಲಿದಂತೆ ಹೊಗಳಿದೊಡೆ ಎಂತು ಮಾಡಿ ಮೆಚ್ಚೆವು; ತರ್ಕಸಾಧಕರ' ಎಂಬುದು ಆತನ ದೇವವಾಣಿ.

ಪಾಂಡವರು ಪರಿಚಯವಾದಂದಿನಿಂದ ಮುಂದೆ ಆತನು ಅವರ ಕಷ್ಟಸುಖಗಳಲ್ಲಿ ಸಮಭಾಗಿಯಾಗುತ್ತಾನೆ. ಇಂದ್ರಪ್ರಸ್ಥದಲ್ಲಿ ಧರ್ಮರಾಯ ಸಿಂಹಾಸನವೇರುವಾಗ ಆತ ಹಾಜರು, ಸುಭದ್ರೆಯನ್ನು ಮೋಹಿಸಿ ಅರ್ಜುನ ಅವಳನ್ನು ಹಾರಿಸಿಕೊಂಡು ಹೋಗುವಲ್ಲಿ ಆತನ ಕೈವಾಡ ಖಾಂಡವವನದಹನದಲ್ಲಿ ಅರ್ಜುನನಿಗೆ ಆತನ ಬೆಂಬಲ. ಮಯನಿಂದ ಸಭಾಭವನ ನಿರ್ಮಾಣ ಆತನ ಸಲಹೆ; ನಾರದ ಮುನಿಯ ಮಾತಿಗೆ ಬಲೆಗೆ 'ಜನಪತಿಯ ಚೈತನ್ಯ ಮೃಗ' ಸಿಲುಕಿದಾಗ ಧರ್ಮರಾಯನನ್ನು ಉದ್ಧರಿಸಿ ರಾಜಸೂಯ ಯಾಗವನ್ನು ಆಗಮಾಡಿಸುವ ಹೊಣೆ ಆತನದು, 'ಏನ ಸಾಧ್ಯವು ಕೃಷ್ಣನೊಲಿದವಗೆ?' ದ್ರೌಪದಿಯ ಸೆಳೆಸೀರೆಯಕಾಲದಲ್ಲಿ ಅವಳುಟ್ಟ ವಸ್ತ್ರ ಅಕ್ಷಯವಾಗಲೆಂದು ಹರಸಿ ಕಾಪಾಡಿದವನು ಆತ; ಪಾಂಡವರ ಅರಣ್ಯವಾಸದಲ್ಲಿ ಬಂದ ಬೆಟ್ಟದಂತಹ ಎಡರುಗಳೆಲ್ಲ ಆತನ ನಾಮ ಸ್ಮರಣೆಯ ಮಾತ್ರದಿಂದ ಮಂಜಿನಂತೆ ಕರಗಿ ಹೋಗುತ್ತವೆ; ಪಾಂಡವರ ದೂತನಾಗಿ ಆತನು ಕೌರವರಲ್ಲಿಗೆ ಬಂದು ತುಂಬಿದ ಸಭೆಯಲ್ಲಿ ತನಗಾದ ಅವಮಾನವನ್ನು ಭಕ್ತರಿಗಾಗಿ ಸಹಿಸಿ, ವಿಶ್ವರೂಪವನ್ನು ಪ್ರದರ್ಶಿಸುವುದರ ಮೂಲಕ ತನ್ನ ಮಹಿಮೆಯನ್ನು ಮೆರೆದನು, ಅಂಧನಾದ ಧೃತರಾಷ್ಟ್ರನಿಗೆ ತಾತ್ಕಾಲಿಕವಾಗಿ ಕಣ್ಣು ನೀಡಿದನು; ಕೌರವರ ನೆಚ್ಚಿನ ಆಳಾದ ಕರ್ಣನಿಗೆ ಅವನ ಜೀವನ ವೃತ್ತಾಂತವನ್ನು ಅರುಹಿ ಅವನ ಕಿವಿಯಲ್ಲಿ 'ಬಿತ್ತಿದನು ಭಯವ'. ಅಷ್ಟೇ ಅಲ್ಲದೆ "ನಿನ್ನಯ ಧೀರರೈವರ ನೋಯಿಸೆನು ರಾಜೀವಸಖನಾಣೆ" ಎಂದು ಅವನಿಂದ ಪ್ರಮಾಣವನ್ನು ಮಾಡಿಸಿ, ಪಾಂಡವರ ತಲೆ ಗಾಯುವ ತನ್ನ ಕಾರ್ಯದಲ್ಲಿ ಕೃತ್ಯಕೃತ್ಯನಾದವನು, ಅರ್ಜುನನ ಸಾರಥಿತನವನ್ನು ಕೈಕೊಂಡು ಕೌರವರನ್ನೆಲ್ಲ ಸಮೂಲವಾಗಿ ನಾಶಮಾಡುವುದರ ಮೂಲಕ ಭೂಭಾರ ಹರಣ ಕಾರ್ಯವನ್ನು ನಿರ್ವಹಿಸಿದನು.

ಕುಮಾರವ್ಯಾಸನು ತನ್ನ ಕಾವ್ಯದ ಮುಖ್ಯಪಾತ್ರಗಳಿಂದ ಕೃಷ್ಣ ಸ್ತುತಿಯನ್ನು ಮಾಡಿಸಿದ್ದಾನೆ. ಇದು ಮುರಾರಿಯ ಲೀಲೆಗೋಸುಗ ಉದಯಿಸಿದ ಜಗ. ಜೀವಜಾಲಕ್ಕೆಲ್ಲ ರಾಜೀವನಾಭನೇ ಒಡೆಯ. ಭೀಷ್ಮಸ್ತುತಿಯ ಪ್ರಕಾರ ಅವನು–

ವಿಶ್ವಶಿಲ್ಪದ ಕುಶಲ ಹಸ್ತನು
ವಿಶ್ವ ರಕ್ಷೆಯ ಮಂತ್ರವಾದಿಯ
ವಿಶ್ವ ಸಮಿಧೆಗಳಗ್ನಿ ಕಾರ್ಯದ
ಬ್ರಹ್ಮಚಾರಿ ವಟು
ವಿಶ್ವ ನಾಟಕ ಸೂತ್ರಧಾರನು
ವಿಶ್ವ ವಿಸ್ಮಯದೈಂದ್ರಜಾಲಕ
ವಿಶ್ವದಂತಸ್ಸ್ಯೂತ ಚೇತನನೀತ
ನೋಡೆಂದ.

ತಾನೆ ನಿರ್ಮಿಸಿ ಪಾಲಿಸುವ ಮೇದಿನಿಯ ಮೇಲೆ ನೂರಾರು ಚಮತ್ಕಾರದ ಹುಸಿ ನಾಟಕ, ಹರ್ಷನಾಟಕ ರುದ್ರನಾಟಕಗಳನ್ನು ಆಡಿಸುತ್ತಿರುವನು. ಅವುಗಳಲ್ಲಿ ಈ ಶಾಶ್ವತ ಪರದೈವ ನಶ್ವರ ನರವೇಷದಲ್ಲಿ ಅಡಗಿ

ಲೌಕಿಕ ಹಾವಭಾವಗಳನ್ನು ಹೂಡುವುದು ಅತಿರಂಜಕವಾದ ಕಪಟನಾಟಕ.

ಕೃಷ್ಣನು ಸರ್ವಶಕ್ತ, ಸೃಷ್ಟಿ ಸ್ಥಿತಿ ಸಂಹಾರಗಳಿಗೆ ಅವನ ಕಿರು ಬೆಟ್ಟುಸಾಕು. ಆವನಿದುರು ಇತರ ಎಲ್ಲ ಸತ್ತ್ವವೂ ಶೂನ್ಯ, ಪರಾಕ್ರಮ ಕೇವಲ ಪೊಳ್ಳು, ಬುದ್ಧಿ ಗೊಡ್ಡು ಯುಕ್ತಿಗೆ ಕೈಕಾಲು ಮೋಸ. ಅವನನ್ನು ಮೋಸಮಾಡ ಬಯುಸಿದರೆ ಅವನು ಹುನ್ನರ ಗಾರ, 'ಕೈತವದ ಶಿಕ್ಷಾಗುರು.' ಸಂಜಯ ಧೃತರಾಷ್ಟ್ರನಲ್ಲಿ ಕೇಳುವ ಪ್ರಶ್ನೆ–

"ಆವಶರದಲಿ ಕೊರತೆ ನಿನ್ನವ
ರಾವ ಬಲದಲಿ ಕುಂದು ಭುವನದೊ
ಳಾವನೈ ಸಮಜೋಳಿ ನಿನ್ನರಮನೆಯ ಸುಭಟರಿಂಗೆ!
ಆವನಿದ್ದೇಗುವನು ಜಗದಧಿ
ದೈವದಲಿ ಸೆಣಸಿದಿರಿ ಪಾಂಡವ
ಜೀವಿಯೆಂದರುಹಿದನು ಗದುಗಿನ ವೀರನಾರಣನ".

ಮಾಧವ ವಿಮುಖನಾದರೆ ಮನುಷ್ಯನಿಗೆ ಕೋಟಲೆ ಸಿದ್ಧ, ಕಡೆಗಾಲ ಸನ್ನಿಹಿತ. "ಒಲಿದವರನುಜ್ಜೀವಿಸುವ ಬಗೆ ಬಲುಹು ಮುರ ಮಥನಂಗೆ ಮುನಿದೊಡೆ ತಲೆಯ ಬರಹವ ತೊಡೆವನಲ್ಲದೆ ಸೈರಿಸನು" ಅಲ್ಲದೆ "ಕೊಲುವನನ್ಯರನ್ಯರಿಂದವೆ ಕೊಲಿಸುವನು ಕಮಲಾಕ್ಷನಲ್ಲದೆ ಉಳಿದ ಜೀವ ವ್ರಾತತೀ ಸ್ವಾತಂತ್ರ್ಯವಿಲ್ಲೆಂದ". ಅಷ್ಟೇಕೆ, ಎಲ್ಲ ಸೌಖ್ಯ ಸಂಕಟಗಳಿಗೂ ಅವನೇ ಅಂತರ್ಬೀಜ. ಎಲ್ಲ ಸುವ್ಯಸನ ದುರ್ವ್ಯಸನಗಳಿಗೂ ಅವನದೇ ಪ್ರೇರಣೆ. ದುರ್ಯೋಧನ ಕೂಡ ತನ್ನವರಲ್ಲಿ ಇದನ್ನು ಒಪ್ಪಿಕೊಳ್ಳುತ್ತಾನೆ–"ಎನ್ನ ಹೃದಯದೊಳಿರ್ದು ಮುರಿವನು ಗನ್ನದಲಿ ಸಂಧಿಯನು".

ಒಟ್ಟಿನಲ್ಲಿ ಶ್ರೀಕೃಷ್ಣ ಸ್ವತಂತ್ರ, ಸರ್ವಜ್ಞ, ಶ್ರೇಷ್ಠತಮ, ನಾವು ಬೊಂಬೆಗಳು; ಬಲ್ಲವರಲ್ಲ, ಬಲ್ಲಿದರಲ್ಲ. ಮಹತೋ ಮಹೀಯನ ಅಗಾಧ ಲೀಲಾಜಾಲವನ್ನು ಪರಿಶೀಲಿಸಲು ಯತ್ನಿಸುವುದು ದೈತ್ಯ ಧೈರ್ಯದ ಉದ್ಧಟತನ. ಜಗವನ್ನು ಎತ್ತಿ ನಿಲ್ಲಿಸುವುದು, ಜನರನ್ನು ಕೃತ ಕೃತ್ಯರನ್ನಾಗಿಸುವುದು–ಕೃಷ್ಣನ ಕೃಪೆ. ನಮ್ಮ ಸೌಭಾಗ್ಯದಿಂದ ಅವನು ದಯಾನಿಧಿ, ಕರುಣಾ ಸಮುದ್ರ, ಅವನ ಕನಿಕರ ನಮಗೆ ವಜ್ರ ಕವಚ, ಅವನ ಅನುರಾಗ ಕಲ್ಪವೃಕ್ಷ, ಅವನ ಮೆಚ್ಚಿಕೆ ಸಿಕ್ಕಿದಲ್ಲಿ ಮುತ್ತಾವುದು ದಕ್ಕಲಾರದು? "ತಾನೆ ಹರಿ ಹರಿದು ತನ್ನೆರಕದವರನು ಸಲಹುವ ಕರುಣವೆಂತುಟೋ ರಾಯ ಗದುಗಿನ ವೀರನಾರಣಗೆ"

ರುಕ್ಮಿಣೀ ರಮಣನನ್ನು ಒಲಿಸಿಕೊಳ್ಳುವುದು ಒಂದು ವಿಧದಲ್ಲಿ ಅತಿ ಸುಲಭ, ಮತ್ತೊಂದು ವಿಧದಲ್ಲಿ ಅತಿ ಕಷ್ಟ, ವೇದಗಳು ಅವನನ್ನು ಹುಡುಕಿ ಹಿಡಿಯಲಾರದೆ ನಾಚಿಕೊಂಡಿವೆ. ಮುನಿಗಳ ತಪಸ್ಸಿಗೆ ಅವನು ಪ್ರಕಾಶನಾಗಿಲ್ಲ. ನಿಜಶರಣರಿಗಾದರೆ ತಾನಾಗಿ ಮೈದೋರುವವನು. ಅನನ್ಯ ಮನಸ್ಸಿನ ಭಾವಶುದ್ಧಿಯ ಅಸ್ಖಲಿತ ಭಕ್ತಿಯಿದ್ದರೆ ಸಾಕು. ಕೃಷ್ಣ ಅಂಗೈಯಿನ ಲಿಂಗ "ಹೆತ್ತ ಮಕ್ಕಳು ನಿಲಲಿ ಭಕ್ತರ ನಿತ್ತಕರೆ ನೆನೆವರಿಗೆ ತನ್ನನು ತೆತ್ತು ಬದುಕುವನೆಂಬ ಬೋಳೆಯರರಸ!"

ಅಲ್ಲದೆ ಧೂರ್ತರವರೆಗೂ ತನ್ನ ಮುರುಕವನ್ನು ಎರಚುವ ಕಡು ಧಾರಾಳಿ ಕೃಷ್ಣ. ತಾನು ಅವತರಿಸುವುದು ಅವರಿಗೋಸ್ಕರಲೂ ಕೊಂಚವೆಂಬ ಪ್ರಕಟನೆಯ ಮೇಲೆ ಅವನ ಮುದ್ರೆ. ಈ ರಹಸ್ಯ ಕೌರವನಿಗೆ ಗೊತ್ತು. "ಕಾವನಾತನೆ ಕೊಲುವ ನಾತನೆ, – ಕೈದಣಿಯೆ ಹೊಯ್ದಾಡುವೆನು ಕೃಷ್ಣನ ಕೆಣಕಿದಲ್ಲದೆ ವಹಿಲದಲಿ ಕೈವಲ್ಯವಿಲ್ಲೆಂದ." ಕೊನೆಗೆ ಆ ಘನ ಸುಯೋಧನನಿಗೆ ಮೋಕ್ಷವನ್ನು ಕೊಡುತ್ತಾನೆ ತನ್ನ ಸಲಹೆಗಳಿಗೊಡಂಬಡದ ಕರ್ಣನಿಗೆ "ಪರಮ ಕರುಣಾಸಿಂಧು ಕರ್ಣಂಗಿರದೆ ನಿಜ ಮೂರ್ತಿಯನು ತೋರಿಸಿದನುರುತರ ಪ್ರೇಮದಲಿ ಮುಕ್ತಿಯ ಪದವ ನೇಮಿಸಿದ." ಎಲ್ಲ ಮಾನವರ ಯೋಗಕ್ಷೇಮವನ್ನೂ ವಿಚಾರಿಸಿಕೊಳ್ಳುವ ಒಂದು ವಿಶಾಲ ಶಿಸ್ತಿನ ಬೀಗದ ಕೈ ಕೃಷ್ಣನ ಬೆರಳಿನಲ್ಲಿದೆ.

ಕೃಷ್ಣ ನಾಣ್ಯವೆಂದರೆ ನಾರಣಪ್ಪನಿಗೆ ಕಡುಲೊಭಿಯ ಕಟ್ಟಾಸೆ. ಆದ್ದರಿಂದ ಶ್ರೀ ಕೃಷ್ಣನ ಅಪ್ರತಿಹತ ತೇಜಸ್ಸಿಗೆ ತಡಬಡಿಸಿ ನರನಂತೆಯೇ ನಾರಾಯಣನ ಪಾದಗಳ ಬಳಿ ಯಿದ್ದು ನಿವೇದನಾ ಪುಷ್ಪವಾಗಲು ಕವಿ ಹಾತೊರೆಯುತ್ತಾನೆ. ದೈವ ಶಕ್ತಿಗೆ ಹಿಲಿ

ಯಲು ಕುಮಾರವ್ಯಾಸನ ಹೃದಯ ಸದಾ ತೆರೆದಿರುತ್ತದೆ. ಶ್ರೀಕೃಷ್ಣನ ಆಗಮಕ್ಕಾಗಿ ಮೈಯೆಲ್ಲಾ ಕಣ್ಣಾಗಿರುತ್ತಾನೆ –

ದೇವ ಬಂದನು ತನ್ನ ನೆನೆವರ
ಕಾವ ಬಂದನು ದೈತ್ಯಕುಲವನ
ದಾವ ಬಂದನು ಭಾಗವತ
ಜನಲೋಲುಪನು ಬಂದ
ಭಾವಿಸುವಡಘಹಾರಿ ಬಂದನು
ಓವಿಬಂದರೆ ತನ್ನ ಬೇಡುವ
ದೇವ ಬಂದನು ವೀರ ನಾರಾಯಣ
ಬಂದನರ ಮನೆಗೆ.

'ಧಾರುಣಿಯ ಪೊರೆಯಿಳಿಸಲೊಸುಗ ಮನುಜ ವೇಷದಲಿ' ಭೂಲೋಕದಲ್ಲಿ ಅವತರಿಸುವ ಶ್ರೀಕೃಷ್ಣನ ಚಲನವಲನ ಹಿರಿಮೆ ಗರಿಮೆಗಳನ್ನು ಕೊಂಡಾಡುವಾಗ ಭಕ್ತಿಯ ಉತ್ಕರ್ಷವಾಗಿ ಕವಿ ಭಕ್ತಿಭಾವ ಪರವಶನಾಗುತ್ತಾನೆ. ಕಾವ್ಯದ ಉದ್ದಕ್ಕೂ ಶ್ರೀ ಕೃಷ್ಣನನ್ನು ಭಕ್ತವಲ್ಲಭನನ್ನಾಗಿ ಸರ್ವಶಕ್ತನನ್ನಾಗಿ ಅತ್ಯುನ್ನತ ಮಟ್ಟದಲ್ಲಿ ಭವ್ಯ ಪ್ರತಿಮೆಯನ್ನಾಗಿ ಕಡೆದಿದ್ದಾನೆ. ಅಷ್ಟೇ ಅಲ್ಲದೆ ಕುಮಾರವ್ಯಾಸನ ಸತ್ಪಾತ್ರಗಳಿಗೂ ಹಾಗೂ ದುಷ್ಪಾತ್ರಗಳಿಗೂ ಹರಿನಾಮಸ್ಮರಣೆಯಲ್ಲಿಯೇ ಮರಣದೊಂದಿಗೆ ಮುಕ್ತಿ ಲಭ್ಯ. ಕನ್ನಡ ಭಾರತದಲ್ಲಿ ಶ್ರೀಕೃಷ್ಣನಿಗೆ ಅರೆ ಘಳಿಗೆ ಬಿಡವಿಲ್ಲ. ಕಾವ್ಯದ ಅಡಿಯಿಂದ ಮುಡಿವರೆಗೂ ಈತನ ಪ್ರಭಾವ ಈತನೇ ಭಾರತಕ್ಕೆ ಆದಿ ಮಧ್ಯ ಮುಕ್ತಾಯ.

ಭಾರತ ಕಥೆಯು ಬೃಹತ್ಪಥವನ್ನು ನಡೆಯುವಾಗ ನಾರಣಪ್ಪನಿಗೆ ಈ ಉಕ್ತಿ ಕೈಗೋಲು. ನಿಶ್ಶಂಕೆಯಿಂದ ಅದನ್ನು ಆಶ್ರಯಿಸಿ ಹೋಗುವುದರಲ್ಲೇ ಅವನ ಕವಿತ್ವ ಯಾತ್ರೆಯ ಸಾರ್ಥಕ್ಯ. "ದೇವ ಸಂತತಿನಲಿಯೆ ಪಾಂಡವ ಜೀವಿ ಹರಿಯೆಂಬೀ ಪ್ರತಿಜ್ಞೆಯ ಭಾವ ಸಂದುದು ಧರ್ಮಜನ ಪಟ್ಟಾಭಿಷೇಕದಲಿ" ಭಾರತಕಥೆ ಅವನಿಗೆ "ಈ ಕರದಿ ಪಾಂಡವರ ಸಲಹಿದ ಪೀತವಸನ ಮುಕುಂದ ಕಂಸಾರಾತಿ ಕೃಷ್ಣ ಚರಿತ ಪಿಯೂಷ." ಯಾವ ಮುಖ್ಯ ಪ್ರಸಂಗವನ್ನು ಹಿಕ್ಕಿ ನೋಡಿದರೂ ವೀರರ ಹಾರಾಟ ಅದರ ಹೊರಮೈ, ಪಾಂಡವ ರಕ್ಷಣೆಗೆ ಕೃಷ್ಣನ ಹೂಟ ಅದರ ಒಳಮೈ. ಅಂದರೆ ಶ್ರೀಕೃಷ್ಣನ ಕುಮಾರವ್ಯಾಸನ ಕಾವ್ಯಾತ್ಮ.

ಪಂಪನಂತೆ ಹಿತಮಿತ ಮೃದುವಚನವಲ್ಲದ ವಾಗ್ಮಿಯಾದ ಜಾನಪದ ಭಕ್ತ ಕವಿ ಕುಮಾರವ್ಯಾಸ ಹರಿಹರನಂತೆ ಭಕ್ತಿಯಾವೇಶದಲ್ಲಿ ಹುಚ್ಚನಾದರೂ ಭಕ್ತಿಯ ಚಿಲುಮೆ ಪುಟಿದು ರಮಣೀಯತೆ ಮುಕ್ಕಳಿಸುವಂತೆ ಶ್ರೀಕೃಷ್ಣಸ್ತುತಿಯನ್ನು ಅಧಿಕವಾಗಿ ಮಾಡಿರುವುದು. ಇನ್ನಾವ ಕವಿಯಲ್ಲಾದರೂ ಮಾರಕ ಗುಣವಾಗಬಹುದಿತ್ತು: ಆದರೆ ಇವನಲ್ಲಿ ಅದೇ ಪೂರಕ, ವೈಶಿಷ್ಟ್ಯ ಪೂರ್ಣವಾಗಿ ಪರಿಣಮಿಸುವಂತೆ ಎಡವದೆ ನಡೆದು ತನ್ನತನವನ್ನುಳಿಸಿಕೊಂಡು ಸಹೃದಯರ ಸಕಲ ಮೆಚ್ಚಿಕೆಗೂ ಪಾತ್ರನಾಗಿ ಭಕ್ತಾಗ್ರೇಸನಾಗಿದ್ದಾನೆ. ಕುಮಾರವ್ಯಾಸನ ಭಕ್ತಿಯ ಭಾಸ್ವಣ್ಣಿನಲ್ಲಿ ಶ್ರೀಕೃಷ್ಣಭಕ್ತ ಭಾವದ ಮಹಾಪ್ರತಿಮೆಯಾಗಿದ್ದಾನೆ. ಶ್ರೀ ಕೃಷ್ಣನಲ್ಲಿ ಪ್ರತಿಮಾ ದೃಷ್ಟಿಯಿಂದ ಸಮರ್ಪಿಸಿರುವ ಅನನ್ಯ ಶರಣಾಗತಿಯ ಭಕ್ತಿ ಮನೋಧರ್ಮವೇ ಭಕ್ತಕವಿ ಕುಮಾರವ್ಯಾಸ ಯೋಗೀಂದ್ರನ ಜೀವನ ದರ್ಶನವೂ ಆಗಿದೆ.

★

## ಗುರುತಿಸಿ - ಬರೆಯಿರಿ.

(ವಿದ್ಯಾರ್ಥಿಗಳಿಗೆ ಮಾತ್ರ)



ಮೇಲಿನ ಚಿತ್ರದಲ್ಲಿ ಸನಾತನಧರ್ಮದೊಬ್ಬ ಮಹಾನ್ ಚೈತನ್ಯದ ಗುರುತುಗಳಿವೆ. ಈಬಗ್ಗೆ ವಿವರಗಳನ್ನು ಬರೆದು ಜೂನ್ 10 ರೊಳಗೆ ಕಳುಹಿಸಿರಿ. ನಿಮ್ಮ ಬರೆದ ಪುಲ್‌ಸ್ಕೇಪ್ ಹಾಳೆ ಮಾತ್ರವಿರಲಿ. ಉತ್ತಮ ಬರಹವನ್ನು ಸಪ್ತಗಿರಿಯಲ್ಲಿ ಪ್ರಕಟಿಸಲಾಗುವುದು. ಸಂ॥

1—6—81 ರಿಂದ
31—6—81 ವರೆಗೆ

# ನಿಮ್ಮ ಭವಿಷ್ಯ

ಡಾ' ಅರ್ಕ ಸೋಮಯಾಜಿ



**ಮೇಷ :**

(ಅಶ್ವಿನಿ, ಭರಣಿ, ಕೃತ್ತಿಕೆ, 1 ನೇ ಪಾದ)

ಧನನಷ್ಟ ಅಥವಾ ಅನಗತ್ಯ ವೆಚ್ಚ ಸೂಚಿತವಾಗಿವೆ. ವಿವಾದ ಅಥವಾ ತುಸು ಅಧಿಕೃತ ಚಿಂತೆ. ಮನೆಯಲ್ಲಿ ಕಳ್ಳತನ ಅಥವಾ ವಸ್ತುಗಳ ಹಾಳಾಗುವಿಕೆ. ಆಪ್ತರಿಂದ ಬೇರ್ಪಡೆ. ಇತರರಿಂದ ವಂಚನೆ, ನೇತ್ರ ಬಾಧೆ. 14 ರಿಂದ ಉತ್ತಮಕಾಲ.

ಅಶ್ವಿನಿ ನಕ್ಷತ್ರದವರಿಗೆ 4, 13, 21, 22,

ಭರಣಿ ನಕ್ಷತ್ರದವರಿಗೆ 1, 3, 12, 14, 20, 22, 24,

ಕೃತ್ತಿಕೆ ಮೊದಲ ಪಾದದವರಿಗೆ 4, 11, 13, 21, 23, ಒಳಿತಿನ ದಿನಗಳು.



**ವೃಷಭ :**

( ಕೃತ್ತಿಕೆ, ರೋಹಿಣಿ, ಮೃಗಶಿರ 1,2 ಪಾದ)

ಧನ, ಗೌರವ, ಒಳ್ಳೆಯ ಸ್ನೇಹಿತರಿದ್ದರೂ ಮಕ್ಕಳ ಮೂಲಕ ತುಸು ಚಿಂತೆ. ತಿಂಗಳ ಮೊದಲ ಪಕ್ಷದಲ್ಲಿ ಹೊಟ್ಟೆನೋವು ಅಥವಾ ಪ್ರಯಾಣ – ಪ್ರಯಾಸ ಸೂಚಿತ. ಒಟ್ಟಿನಲ್ಲಿ ತಿಂಗಳು ಪೂರ್ತ ಸಾಧಾರಣ.

ಕೃತ್ತಿಕೆ 2, 3, 4 ಪಾದಗಳವರಿಗೆ 1, 2, 6, 13, 23, 25

ರೋಹಿಣಿ ನಕ್ಷತ್ರದವರಿಗೆ 1, 7, 14, 17, 22, 24, 26

ಮೃಗಶಿರ 1, 2 ಪಾದದವರಿಗೆ 1, 6, 15, 23, 25 ಒಳಿತಿನ ದಿನಗಳು.



**ಮಿಥುನ :**

(ಮೃಗಶಿರ, ಆರ್ದ್ರ, ಪುನರ್ವಸು 1,2,3 ಪಾದ)

ಮೊದಲ ಮೂರು ವಾರಗಳಲ್ಲಿ ಪ್ರಣಯ ಭಾವ. ಆದರೂ ಬಂಧುಗಳಿಂದ ಚಿಂತೆ ಅಥವಾ ವಿವಾದ ಅಥವಾ ಆಪ್ತರಿಂದ ಬೇರ್ಪಡೆ. ದುಷ್ಟಸಲಹೆಗಳಿಂದ ಧನನಷ್ಟ. ಹೆಂಡತಿಯ ಅತೃಪ್ತಿ ಅಥವಾ ನೇತ್ರಬಾಧೆ ಸೂಚಿತ.

ಮೃಗಶಿರ 3, 4, ಪಾದಗಳವರಿಗೆ 4, 8, 15, 18, 25, 27,

ಆರ್ದ್ರಾ ನಕ್ಷತ್ರದವರಿಗೆ 3, 5, 9, 17, 19, 26, 28

ಪುನರ್ವಸು 1, 2, 3, ಪಾದದವರಿಗೆ 1, 8, 13, 15, 16, 25, 27, 29, ಒಳಿತಿನ ದಿನಗಳು.



**ಕರ್ಕಾಟಕ :**

(ಪುನರ್ವಸು 4 ಪಾದ ಪುಷ್ಯ, ಆಶ್ಲೇಷ)

ಆರೋಗ್ಯ, ಪ್ರಣಯಭಾವ, ಯಶ, ಗೌರವ ಲಾಭ. ಧನ, ಹೊಸಉಡುಪುಗಳು ಸೂಚಿತ. ಏನೇ ಆದರೂ ಕುಜನರಿಂದಾಗಿ ತಕ್ಕ ಸ್ಥಾನಮಾನ ದೊರೆಯುತ್ತಿಲ್ಲ ಎಂಬ ಅತೃಪ್ತಿ. ಆಗಾಗ ಪ್ರಯಾಣ. ಕಡೆಯವಾರ ತುಂಬ ಉತ್ತಮ. ಪುನರ್ವಸು 4 ನೆಯ ಪಾದದವರಿಗೆ 1, 3, 6, 12, 20, 27, 29

ಪುಷ್ಯ ನಕ್ಷತ್ರದವರಿಗೆ 3, 5, 8, 13, 20, 22, 24, 29,

ಆಶ್ಲೇಷ 1 ಪಾದದವರಿಗೆ 2, 4, 13, 21, 23, 30, ಒಳಿತಿನ ದಿನಗಳು.



**ಸಿಂಹ :**

(ಮಖ, ಪೂರ್ವ ಫಾಲ್ಗುಣ ಉತ್ತರ 1 ನೇ ಪಾದ:)

ಧನಾರ್ಜನೆ, ಯಶೋಲಾಭ,ಗೌರವಲಾಭ ಆದರೆ ಅನಗತ್ಯ ವೆಚ್ಚ. ತಿಂಗಳ ದ್ವಿತೀಯ ಪಕ್ಷವು ವಿಶೇಷ ಶುಭಪ್ರದ. ಅಸ್ಪಷ್ಟವಾದ ಆಂದೋಳನ. ಇದ್ದರೂ ಒಟ್ಟಾರೆ ಈ ತಿಂಗಳು ಸಂತಸದಾಯಕ.

ಮಖ ನಕ್ಷತ್ರದವರಿಗೆ 2, 4, 9, 13, 21, 23, 28

ಪುಷ್ಯ ನಕ್ಷತ್ರದವರಿಗೆ 3, 5, 8, 13, 20, 22

ಉತ್ತರ ಮೊದಲಪಾದವರಿಗೆ 2, 4, 13, 21 23, 30 ಒಳಿತಿನ ದಿನಗಳು.



**ಕನ್ಯಾ :**

(ಉತ್ತರ 2,3,4, ಪಾದ, ಹಸ್ತ, ಚಿತ್ತ 1,2 ಪಾದ)

ಧನಲಾಭವಿದ್ದರೂ ಮನಸ್ಸಂತೋಷವಿರದು. ತುಸು ಅನಾರೋಗ್ಯ ಹಾಗೂ ಅವಮಾನಭಾವ. ತಿಂಗಳ ದ್ವಿತೀಯಾರ್ಧ ಅದರಲ್ಲೂ ಕಡೆಯವಾರ ಸಾಪೇಕ್ಷವಾಗಿ ಉತ್ತಮ. ಪ್ರಯಾಣ, ಪ್ರಯಾಸ, ಆಪ್ತರಿಂದ ಬೇರ್ಪಡೆ ಸೂಚಿತ.

ಉತ್ತರಾ 2, 3, 4, ಪಾದಗಳವರಿಗೆ 4, 6, 16, 23, 25, 29

ಹಸ್ತ ನಕ್ಷತ್ರದವರಿಗೆ 5, 12, 14, 16, 22 26

ಚಿತ್ತ ನಕ್ಷತ್ರದ 1, 2 ಪಾದದವರಿಗೆ 4, 6, 10, 11, 16, 23, 25 ಒಳಿತಿನ ದಿನಗಳು.



## ತುಲಾ :

(ಚಿತ್ತ 3,4 ಪಾದ, ಸ್ವಾತಿ, ವಿಶಾಖಾ 1,2,3 ಪಾದ)

ಅನಾರೋಗ್ಯ ಅಥವಾ ಹೆಂಡತಿಯ ಅತೃಪ್ತಿ. ಅಥವಾ ಪ್ರಯಾಣ, ಪ್ರಯಾಸ ಧಾರ್ಮಿಕ ಭಾವನೆಯಿಂದ ಚಿಂತೆಯ ನಾಶ. ನಿಸ್ಪೃಹೆಯ ಭಾವ. ವಿವಾದಗಳೂ ಉಂಟು, ಆರ್ಥಿಕ ಒತ್ತಡ ಹೆಚ್ಚು. ಚಿತ್ತಶಾಂತಿಗಾಗಿ ರುದ್ರಾಭಿಷೇಕ ಮಾಡಲು ಸೂಚಿಸಲಾಗಿದೆ.

ಚಿತ್ತ 3, 4, ಪಾದದವರಿಗೆ 6, 8, 13, 18, 25, 27,

ಸ್ವಾತಿ ನಕ್ಷತ್ರದವರಿಗೆ 5, 9, 14, 19, 26, 30

ವಿಶಾಖಾ 1, 2, 3, ಪಾದದವರಿಗೆ 1, 6, 8, 13, 18, 25 ಒಳಿತಿನ ದಿನಗಳು.



## ವೃಶ್ಚಿಕ :

(ವಿಶಾಖ 4 ಪಾದ, ಅನೂರಾಧ, ಜ್ಯೇಷ್ಠ)

ತಿಂಗಳ ಮೊದಲರ್ಧದಲ್ಲಿ ಪ್ರಯಾಣ ಪ್ರಯಾಸ ಸೂಚಿತವಾಗಿದೆ. ಹೆಂಡತಿಯೊಡನೆ ವಿವಾದ ಅಥವಾ ನೇತ್ರಬಾಧೆ. ಅಧಾರ್ಮಿಕ ಪ್ರವೃತ್ತಿ ಆದರೂ ಧನಲಾಭ, ಸುಸ್ನೇಹ, ಯಶ. ಹೊಸಉಡುವು ಹಾಗೂ ಪ್ರಣಯಭಾವ ಹೊಂದುವರು.

ವಿಶಾಖ 4 ನೇಪಾದದವರಿಗೆ 10, 12, 15, 20, 27,

ಅನುರಾಧಾ ನಕ್ಷತ್ರದವರಿಗೆ 12, 11, 21, ರಿಂದ 30 ವರೆಗೆ

ಜ್ಯೇಷ್ಠಾ ನಕ್ಷತ್ರದವರಿಗೆ 8, 10, 12, 15, 16, 22, 27, ಒಳಿತಿನ ದಿನಗಳು.



## ಧನುಸ್ಸು :

(ಮೂಲ, ಪೂ. ಉ. 1 ನೇ ಪಾದ)

ಧನನಷ್ಟ ಹಾಗೂ ಗೌರವನಾಶಗಳು ಸೂಚಿತವಾಗಿವೆ. ಸ್ತ್ರೀಯರ ಮೂಲಕ ತೊಂದರೆ ಅಥವಾ ವಿವಾದಗಳಿಂದಾಗಿ ಚಿತ್ತ ಶಾಂತಿ ಭಂಗ. ದ್ವಿತೀಯ ಪಕ್ಷದಲ್ಲಿ ಪ್ರಯಾಣ ಹಾಗೂ ಉದರಬಾಧೆ. ಕಡೆಯವಾರ ಪ್ರಣಯಭಾವ, ಧನಲಾಭ, ಹೊಸಉಡುವು.

ಮೂಲಾ ನಕ್ಷತ್ರದವರಿಗೆ 2, 4, 11, 13, 19, 23, 30

ಪೂರ್ವಾಷಾಢ ನಕ್ಷತ್ರದವರಿಗೆ 3, 5, 12, 18, 22

ಉತ್ತರಾಷಾಢ 1 ಪಾದದವರಿಗೆ 2, 4, 11, 13, 18, 23, 27 ಒಳಿತಿನ ದಿನಗಳು.



## ಮಕರ :

(ಉ. 2,3,4 ಪಾದ, ಶ್ರವಣ, ಧನಿಷ್ಠ, 1,2 ಪಾದ)

ಧನ ಧಾನ್ಯಲಾಭಗಳಿವೆ. ಅಧಾರ್ಮಿಕತೆ ಅಥವಾ ಅನಾರೋಗ್ಯ ಸೂಚಿತ. ಮಕ್ಕಳ ಮೂಲಕ ತುಸು ಚಿಂತೆ. ಜನರು ವಿವಾದಗಳನ್ನುಂಟಾಗಿಸಲು ಪ್ರಯತ್ನಿಸುವರು. ತಿಂಗಳ ಎರಡನೆಯ ವಾರದಲ್ಲಿ ಯಶ. ಕಡೆಯ ವಾರದಲ್ಲಿ ಸ್ತ್ರೀಯರ ಮೂಲಕ ತೊಂದರೆ ಒಟ್ಟಿನಲ್ಲಿ ತಿಂಗಳು ಸಾಧಾರಣ.

ಉತ್ತರಾಷಾಢ 2, 3, 4 ಪಾದಗಳವರಿಗೆ 4, 6, 13, 15, 21 25

ಶ್ರವಣನಕ್ಷತ್ರದವರಿಗೆ 3, 5, 14, 20

ಧನಿಷ್ಠಾ 1, 2 ಪಾದಗಳವರಿಗೆ 4, 6, 13, 15, 21, 25 ಒಳಿತಿನ ದಿನಗಳು.



## ಕುಂಭ :

(ಧನಿಷ್ಠ 3,4 ಪಾದ ಶತಭಿಷ ಪೂ. ಭಾ. 1, 2, 3ಪಾ)

ಪ್ರಯಾಣ, ಪ್ರಯಾಸ ಅಥವಾ ತುಸು ಅನಾರೋಗ್ಯ ಸೂಚಿತ. ಆಪ್ತರಿಂದ ಬೇರ್ಪಡಿಕೆ ಉತ್ಸಾಹನಾಶ, ಉದರಬಾಧೆ ಅಥವಾ ಜ್ವರ ಬಂಧುಗಳ ಆಗಮನ ಹಾಗೂ ಹಿರಿಯರ ಪ್ರಶಂಸೆ. ಗೃಹಕಲಹ.

ಧನಿಷ್ಠಾ 3, 4 ಪಾದದಗಳವರಿಗೆ 6, 8, 15 61, 18, 27

ಶತಭಿಷಾ ನಕ್ಷತ್ರದವರಿಗೆ 2, 7, 9, 17, 24, 26

ಪೂರ್ವಾಭಾದ್ರ 1, 2, 3 ಪಾದದವರಿಗೆ 6, 15, 18, 23, 27 ಒಳಿತಿನ ದಿನಗಳು.



## ಮೀನ :

(ಪೂ. ಭಾ. 4 ಪಾದ ಉ. ಭಾ. ರೇವತಿ)

ಆಗಾಗ ಪ್ರಯಾಣ. ಪ್ರಣಯಭಾವ. ಅಧಾರ್ಮಿಕವಾಗಿ, ಅಥವಾ ಪುತ್ರರ ಮೂಲಕ ಧನಲಾಭ. ವಸ್ತುಸಮೃದ್ಧಿ, ಸುಸ್ನೇಹ. ಕಡೆಯವಾರದಲ್ಲಿ ಬಂಧುಗಳ ಆಗಮನ ಹಾಗೂ ಹಿರಿಯರ ಪ್ರಶಂಸೆ.

ಪೂರ್ವಾಭಾದ್ರ 4 ನೇಪಾದದವರಿಗೆ 8, 22, 38, 20, 25,

ಉತರಾಭಾದ್ರ ನಕ್ಷತ್ರದವರಿಗೆ 2, 5, 9, 23

ರೇವತಿ ನಕ್ಷತ್ರದವರಿಗೆ 6, 22, 86 22 ಒಳಿತಿನ ದಿನಗಳು.

✱

## ನನ್ನ ಕಾಪಾಡು

ದೇವ ವೆಂಕಟರಮಣ !
ದಾರಿ ತೊರದಿದೆ ತೋರಿಸಯ್ಯ ದೇವ
ಜೀವ ಹಂಬಲ ತೊರೆದು
ನಿನ್ನೆಡೆಗೆ ಧಾವಿಸುತ

ಬರುತಲಿದೆ ರಕ್ಷಣೆಯ ಬೇಡಿ ಭಗವಂತ—
ಗಜರಾಜನನು ಕಾಯ್ದ

ದ್ರೌಪದಿಗೆ ಅಕ್ಷಯವ ಕೃಪೆಗೈದ
ನೀನಿಂದು ನನ್ನ ಕಾಪಾಡಯ್ಯ

ಗಜರಾಜನಾ ಭಕ್ತಿ
ದ್ರೌಪದಿಯ ಅನನ್ಯತೆ
ನನ್ನ ಬಳಿ ಇಲ್ಲ
ಆದರೂ ಬೇಡುತಿಹೆ.

ನು. ರಂಗನಾಥ – ಬೆಂಗಳೂರು.

# ವಾರ್ತಾಲಹರಿ

## ನೈತಿಕ ಶಿಕ್ಷಣ ಶಿಬಿರ

ತಿರುಪತಿಯಲ್ಲಿ ಪ್ರತಿ ವರ್ಷವೂ ಬೇಸಗೆಯಲ್ಲಿ ಉಪಾಧ್ಯಾಯರಿಗಾಗಿ ಹಿಂದೂರಕ್ಷಣ ಸಂಸ್ಥೆಯವರು ನಡೆಸುವ ನೈತಿಕ ಶಿಕ್ಷಣ ಶಿಬಿರ ಈ ಬಾರಿ ಮೇ 1 ರಿಂದ 15 ರವರೆಗೆ ನಡೆಯುವಂತೆ ಯೋಜಿಸಲಾಗಿದ್ದು ಮೇ ಒಂದರಂದು ಶಿಬಿರದ ಉದ್ಘಾಟನೆ ಸರಳವಾಗಿ ನಡೆಯಿತು.

ವೇದಪುರುಷ ಪ್ರಾರ್ಥನೆಯ ನಂತರ ಸಭೆಯನ್ನು ಸ್ವಾಗತಿಸಿದ ಡಾ॥ ಅರ್ಕಸೋಮಯಾಜಿ ಅವರು ನೈತಿಕ ಮೌಲ್ಯಗಳ ಅಗತ್ಯವನ್ನೂ ಇಂದಿನ ಯಂತ್ರನಾಗರಿಕತೆಯ ಹಿನ್ನೆಲೆಯಲ್ಲಿ ಸನಾತನಧರ್ಮದ ಆಧ್ಯಾತ್ಮ ವಿದ್ಯೆಯ ಅಗತ್ಯವನ್ನೂ ಭಾವ ಪೂರ್ಣವಾಗಿ, ಪ್ರತಿಭಾಪೂರ್ಣವಾಗಿ, ಕಾವ್ಯ, ಇತಿಹಾಸ, ಪುರಾಣ, ವಿಜ್ಞಾನಗಳಿಂದ ಉದ್ಧರಿಸುತ್ತಾ ಸಭಿಕರು ಸಾಭಿಪ್ರಾಯ ಹೊಂದುವಂತೆ ವಿವರಿಸಿದರು

ಶಿಕ್ಷಣ ಶಿಬಿರದ ಉದ್ಘಾಟನೆಯನ್ನು ಮಾಡಿದ ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ.ವಿ.ಆರ್.ಕೆ. ಪ್ರಸಾದರು ಹಿಂದೂ ಧರ್ಮರಕ್ಷಣಸಂಸ್ಥೆ ಒಂದು ಮೂಲ ವಿಚಾರ ವಿನಿಮಯ ಕೇಂದ್ರದಂತೆ ಎಂದೂ, ಇಲ್ಲಿ ಭಾಗವಹಿಸಿದ ಅಧ್ಯಾಪಕರು ಪರಸ್ಪರ ವಿಚಾರ ವಿನಿಮಯದಿಂದ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಹೈಂದವ ಧಾರ್ಮಿಕ ಪ್ರಸರಣದ ಕಾರ್ಯದಲ್ಲಿ ತೊಡಗಲು ಒಂದು ಪೂರಕ ವೇದಿಕೆಯಂತೆ ಈ ಶಿಕ್ಷಣವನ್ನು ಪರಿಗಣಿಸಬೇಕೆಂದೂ ಕರೆನೀಡಿದರು.

ಸಾರ್ವಜನಿಕ ಸಂಬಂಧಾಧಿಕಾರಿ ಶ್ರೀ ರಾವುಲ ಸೂರ್ಯನಾರಾಯಣ ಮೂರ್ತಿಯವರು ಮಾತನಾಡುತ್ತ ಹಿಂದೂಧರ್ಮ ಪ್ರಸಾರದಲ್ಲಿ ಈ ಶಿಕ್ಷಣ ಶಿಬಿರ ಗಮನಾರ್ಹ ಬೆಳವಣಿಗೆಯನ್ನು ಸಾಧಿಸುವ ಬಗ್ಗೆ ತಮಗೆ ಭರವಸೆಯಿದೆಯೆಂದೂ ಇಲ್ಲಿ ಭಾಗವಹಿಸುವ ಅಧ್ಯಾಪಕರ ಸಂಖ್ಯೆ ಅಮುಖ್ಯವೆಂದೂ ಅವರ ನೈತಿಕ, ಕಾರ್ಯಶೀಲತೆಯ ಉತ್ಸಾಹವೇ ಮುಖ್ಯವೆಂದೂ ತಿಳಿಸಿದರು.

ಸಮಾರಂಭದ ಸಭಿಕರನ್ನು ಶ್ರೀ ಲಕ್ಷ್ಮಣಯ್ಯ ನಾಯುಡು ಅವರು ವಂದಿಸಿದರು.

ಹದಿನೈದು ದಿನಗಳ ಈ ನೈತಿಕ ಶಿಕ್ಷಣ ಶಿಬಿರದಲ್ಲಿ ಭಾಗವಹಿಸಿದ ಉಪಾಧ್ಯಾಯರನ್ನುದ್ದೇಶಿಸಿ ಆಂಧ್ರಪ್ರದೇಶದ ಹಲವಾರು ಹಿರಿಯರು, ವಿದ್ವಾಂಸರು ಮಾತನಾಡಿದರು

ದಿನಾಂಕ 15–5–81 ರಂದು ಶಿಬಿರದ ಸಮಾರೋಪ ನಡೆಯಿತು ಮುಖ್ಯ ಅತಿಥಿಗಳಾಗಿ ತಿ ತಿ. ದೇ. ಆಡಳಿತ ನಿರ್ವಾಹಕ ಮಂಡಳಿಯ ಮಾಜಿ ಅಧ್ಯಕ್ಷ ಶ್ರೀ ಸಿ. ಅನ್ನಾರಾವ್ ಅವರು ಭಾಗವಹಿಸಿ ಈ ಶಿಬಿರದ ಉದ್ದೇಶ ಸಾಫಲ್ಯಕ್ಕೆ ಹಾರೈಸಿದರು.

## 16 ನೇ ಶತಮಾನದ ಶಿಲ್ಪಗಳ ಶೋಧನೆ

ಆಂಧ್ರಪ್ರದೇಶದ ಅದಿಲಾಬಾದ್ ಜಿಲ್ಲೆಯ ಚೆನ್ನೂರು ತಾಲೂಕಿನಲ್ಲಿ ಚೆನ್ನೂರು–ವೇಮನಪಲ್ಲಿಯ ಸರ್ಪಾಕಾರದ ಹಾದಿಯ ಘನಕಾನನದಲ್ಲಿ 6 ಅಡಿಗಳಿಂದ 8 ಅಡಿ ಎತ್ತರದವರೆಗಿನ ಹನ್ನೆರಡು ಹಿರಿಯ ಏಕಶಿಲಾ ಶಿಲ್ಪಖಂಡಗಳು ಶೋಧಿತವಾಗಿವೆ.

ವೇಮನಪಲ್ಲಿಯ ಪಂಚಾಯತಿಯ ಮಾಜಿ ಅಧ್ಯಕ್ಷ ಶ್ರೀಕೊಲಿ ಗೋಪಾಲರಾವ್ ಅವರು ಪ್ರಾಕ್ತನ ಇಲಾಖೆಯ ಹೈದರಾಬಾದ್ ವೃತ್ತದ ಸೂಪರಿಂಟೆಂಡಿಂಗ್ ಆರ್ಕಿಯಾಲಜಿಸ್ಟ್ ಡಾ॥ ಕೆ. ಕೃಷ್ಣಮೂರ್ತಿ ಹಾಗೂ ಅವರ ಪ್ರಾಕ್ತನ ಸಂಶೋಧಕ ಸಿಬ್ಬಂದಿಯನ್ನು ಈ ವಿಗ್ರಹಗಳಿದ್ದಲ್ಲಿಗೆ ಕರೆದೊಯ್ದರು. ಈ ವಿಗ್ರಹಗಳೆಲ್ಲ ವೇಮನಪಲ್ಲಿಯಿಂದ 1.5.ಕಿ.ಮಿ. ದೂರದ ಕಾಡಿನಲ್ಲಿ ದಿಬ್ಬದ ಮೇಲೆ ಇದ್ದವು.

ಡಾ॥ ಕೃಷ್ಣಮೂರ್ತಿ ಅವರ ಅಭಿಪ್ರಾಯದಂತೆ ಇಲ್ಲಿನ ವೇಣುಗೋಪಾಲ, ಬಲರಾಮ, ನರಸಿಂಹ, ಗೌತಮಬುದ್ಧ, ಪರಶುರಾಮ, ಕೂರ್ಮ, ಹನುಮಂತ, ಭೈರವ. ಕಾಳೀಯಮರ್ದನ, ಪಾರ್ವತಿ, ಮಹಿಷಾಸುರ ಮರ್ದಿನಿ ವಿಗ್ರಹಗಳ ಕ್ರಿ.ಶ. 16ನೇ ಶತಕಕ್ಕೆ ಸೇರಿದವು.

ಈ ವಿಗ್ರಹಗಳೆಲ್ಲವೂ ಗೊಂಡರ ಕಾಲಕ್ಕೆ ಸೇರಿದವುಗಳು ಎಂದೂ ಅವರು ಭಾವಿಸುತ್ತಾರೆ. ಗೊಂಡರ ರಾಜ್ಯದ ಕೇಂದ್ರವಾದ ಮಹಾರಾಷ್ಟ್ರದ ಚಂದ್ರಾಪುರದಲ್ಲಿಯೂ ಇಂತಹವೇ ಲಕ್ಷಣಗಳ ಮೂರ್ತಿಗಳಿರುವುದನ್ನು ಅವರು ತಮ್ಮ ಭಾವನೆಗೆ ಸಮರ್ಥನೆಯೆಂದು ತಿಳಿಸಿದರು.

ವೇಮನಪಲ್ಲಿಯ ಶಿವದೇವಾಲಯದಲ್ಲಿ ಅನ್ನಪೂರ್ಣೆ, ಗಣೇಶ, ಹನುಮಂತ ವಿಗ್ರಹಗಳೂ ಪತ್ತೆಯಾಗಿವೆ. ಅನ್ನಪೂರ್ಣೆಯ ವಿಗ್ರಹವನ್ನು 15 ನೆಯ ಶತಮಾನದಷ್ಟು ಹಿಂದಕ್ಕೆ ಒಯ್ಯಲಾಗಿದೆ. ಕೃಷ್ಣಮೂರ್ತಿಯವರೆಂದಂತೆ ಹಲ ವಿಗ್ರಹಗಳು ಲಲಾಟದಲ್ಲಿ ವೈಷ್ಣವ ಸಂಕೇತಗಳನ್ನು ಹೊಂದಿವೆ.

(ಆಧಾರ: 'ಹಿಂದೂ')

## ವೇದ ಸಂಸ್ಕೃತಿ ಪರಿಚಯ ಪರೀಕ್ಷೆಗಳು

ಕರ್ನಾಟಕದ ವಿಶ್ವಹಿಂದೂ ಪರಿಷತ್ ನಡೆಸುತ್ತಿರುವ ರಾಮಾಯಣ ಮಹಾಭಾರತ ಪರಿಚಯ ಪರೀಕ್ಷೆಗಳು ದಿನೇ ದಿನೇ ಜನಪ್ರಿಯವಾಗುತ್ತಿದ್ದು, ಈ ಬಾರಿಯ ಪರೀಕ್ಷಾ ಫಲಿತಾಂಶಗಳು ಹೊರಬಿದ್ದಾಗ, ವಿದ್ಯಾರ್ಥಿಗಳಲ್ಲಿ ಪರೀಕ್ಷೆಯನ್ನು ಎದುರಿಸುವ ಉತ್ಸಾಹವಷ್ಟೇ ಅಲ್ಲದೆ ಒಳ್ಳೆಯ ಫಲಿತಾಂಶ ಪಡೆಯುವ ಸಾಮರ್ಥ್ಯವೂ ಉಂಟು ಎಂಬುದು ಸಾಬೀತಾಗಿದೆ.

ಎಸ್. ಎಸ್. ಎಲ್. ಸಿ. ಪರೀಕ್ಷೆಗಳಲ್ಲಿ ಕರ್ನಾಟಕದಲ್ಲಿ ಹಿಂದುಳಿದ ಜಿಲ್ಲೆಯಾದ ಕೋಲಾರ ಈ ಪರೀಕ್ಷೆಗಳಲ್ಲಿ ಮೊದಲ ಸ್ಥಾನಗಳನ್ನು ಪಡೆದಿರುವುದು ಜಿಲ್ಲೆಯ ಆಧ್ಯಾತ್ಮಿಕ ಸಾಂಸ್ಕೃತಿಕ ಲವಲವಿಕೆಗೆ ಎತ್ತಿದ ವೈಜಯಂತಿಯಾಗಿದೆ ಎನ್ನಬಹುದು.

ಶ್ರೀನಿವಾಸಪುರದ ಸರ್ಕಾರಿ ಕಿರಿಯ ಕಾಲೇಜಿನ ವಿದ್ಯಾರ್ಥಿನಿ ಎಂ. ವಿ. ಶ್ಯಾಮಲಾಂಬ ಮೊದಲ ಸ್ಥಾನ ಗಳಿಸಿದ್ದಾಳೆ (ರಾಮಾಯಣ)

ರಾಮಾಯಣದ ಜಿಲ್ಲಾ ಮಟ್ಟದ ಮೊದಲ ಸ್ಥಾನ ಬಂ[illegible]ರಪೇಟೆಯ ಎಂ.ಎಸ್. ರಾಜೇಶ್ವರಿ, ಎರಡನೆಯ[illegible]ನ ಅದೇ ಊರಿನ ವಿ. ಶ್ರೀನಿವಾಸ ಅವರಿಗೂ[illegible]ದೆ.

ಮಹಾ[illegible]ರತದ ಮೊದಲ ಎರಡು ಸ್ಥಾನಗಳೂ ಕೆ. ಜಿ. ಎಫ್[illegible] ಗೆ ಬಂದಿವೆ. ಅವರಗಳೆಂದರೆ ಬಿ. ರವಿ ಕಿಶೋರ್, ಹಾಗೂ ಎಸ್. ಹೇಮಲತ.

ಮುಂದಿನ ಈ ಬಾರಿಯಪರೀಕ್ಷೆಗಳಲ್ಲಿ ಸುಮಾರು 40000 ವಿದ್ಯಾರ್ಥಿಗಳು ಭಾಗವಹಿಸಬಹುದೆಂಬ ನಿರೀಕ್ಷೆ ಇದೆ (ಆಧಾರ: 'ಜನಬಿಂಬ')

ತಿರುಮಲೆ–ತಿರುಪತಿ ದೇವಸ್ಥಾನಗಳ ಹಿಂದೂ ಧರ್ಮ ರಕ್ಷಣ ಸಂಸ್ಥೆ ನಡೆಸುತ್ತಿರುವ ಪುರಾಣಾಧ್ಯಯನ ಪರೀಕ್ಷೆಗಳೂ ಹೆಚ್ಚು ಹೆಚ್ಚು ವಿದ್ಯಾರ್ಥಿಗಳನ್ನು ಆಕರ್ಷಿಸುತ್ತಿವೆ.

ಈ ಬಾರಿಯ ಮೊದಲ ೩ ಸ್ಥಾನಗಳು ಕ್ರಮವಾಗಿ ಕುಮಾರಿ ಆರ್. ಟಿ. ಎಸ್. ಶೈಲೇಶ್ವರಿ (ಪೂರ್ವ ಗೋದಾವರಿ ಜಿಲ್ಲೆ) ಕುಮಾರಿ ಬಿ. ಉಷಾರಾಣಿ (ಗುಂಟೂರು ಜಿಲ್ಲೆ) ಚಿ॥ ಕೆ ಕೃಷ್ಣಮೂರ್ತಿ (ಅನಂತಪುರ ಜಿಲ್ಲೆ) ಇವರುಗಳಿಗೆ ದೊರಕಿವೆ. ಪರೀಕ್ಷೆಗಳಲ್ಲಿ ಭಾಗವಹಿಸಿದ ಹದಿನೈದು ಸಾವಿರ ವಿದ್ಯಾರ್ಥಿಗಳಲ್ಲಿ 12 ಸಾವಿರ ವಿದ್ಯಾರ್ಥಿಗಳು ತೇರ್ಗಡೆಯಾಗಿದ್ದಾರೆ.

ಮುಂದಿನ ಸಲದ ಪರೀಕ್ಷೆಗಳಲ್ಲಿ ಭಾಗವಹಿಸುವ ವಿದ್ಯಾರ್ಥಿಗಳ ಸಂಖ್ಯೆ ಮೂವತ್ತು ಸಾವಿರವನ್ನು ದಾಟಬಹುದೆಂದು ಅಂದಾಜು ಮಾಡಲಾಗಿದೆ.

## ಶೃಂಗೇರಿಯಲ್ಲಿ ತಿ.ತಿ.ದೇ. ಕಲ್ಯಾಣಮಂಟಪ

ತಿ.ತಿ.ದೇ. ದೇಶಾದ್ಯಂತ ಅನೇಕ ಪುಣ್ಯ ಕ್ಷೇತ್ರಗಳಲ್ಲಿ ಕಲ್ಯಾಣ ಮಂಟಪಗಳನ್ನು ನಿರ್ಮಿಸಿ ಆಸ್ತಿಕ ಯಾತ್ರಿಕಾನುಕೂಲಗಳನ್ನು ಪೂರೈಸುತ್ತಿರುವ ಸಂಗತಿ ಓದುಗರಿಗೆ ತಿಳಿದೇ ಇದೆ. ಕರ್ನಾಟಕದ ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿಯಲ್ಲಿ ಹೊಸದೊಂದು ಕಲ್ಯಾಣ ಮಂಟಪವನ್ನು ಈಚೆಗೆ ನಿರ್ಮಿಸಲಾಗಿದ್ದು ದಿನಾಂಕ 6–5–81 ರಂದು ಕರ್ನಾಟಕದ ಮುಜರಾಯಿ ಇಲಾಖಾ ಕಮೀಶನರ್ ಅವರ ಅಧ್ಯಕ್ಷತೆಯಲ್ಲಿ ಶೃಂಗೇರೀ ಪೀಠಾಧ್ಯಕ್ಷ ಜಗದ್ಗುರು ಶಂಕರಾಚಾರ್ಯ ಶ್ರೀಶ್ರೀ ಅಭಿನವ ವಿದ್ಯಾತೀರ್ಥರು ಈ ಭವನದ ಉದ್ಘಾಟನೆಯನ್ನು ನಡೆಸಿಕೊಟ್ಟರು. ತಿ.ತಿ. ದೇವಸ್ಥಾನಗಳ ಪರವಾಗಿ ಇತರ ಅಧಿಕಾರಿಗಳೊಡನೆ ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ.ವಿ.ಆರ್.ಕೆ. ಪ್ರಸಾದರು ಸಮಾರಂಭದಲ್ಲಿ ಭಾಗವಹಿಸಿದ್ದರು.

## ಕರ್ನಾಟಕ ಹರಿದಾಸ ಆರಾಧನೋತ್ಸವಗಳು

ತಿರುಮಲೆ–ತಿರುಪತಿ ದೇವಸ್ಥಾನಗಳ ಹರಿದಾಸ ಸಾಹಿತ್ಯಪ್ರಾಜೆಕ್ಟ್ ಈ ವರ್ಷದ ಹರಿದಾಸ ಆರಾಧನಾ ಉತ್ಸವಗಳನ್ನು ಬೆಂಗಳೂರು ಹಾಗೂ ಮುಳಬಾಗಿಲಿನಲ್ಲಿ ಆಚರಿಸಲು ಯೋಜಿಸಿದೆ.

ಬೆಂಗಳೂರಿನ ತಿ.ತಿ.ದೇ. ಕಲ್ಯಾಣಮಂಟಪದಲ್ಲಿ ಜೂನ್ ತಿಂಗಳ 8,9 ರಂದೂ ಮುಳಬಾಗಿಲಿನ ನರಸಿಂಹತೀರ್ಥದ ಶ್ರೀಪಾದರಾಜರ ಮಠದಲ್ಲಿ ಜೂನ್ 15, 16, ರಂದೂ ಆಚರಿಸಲಾಗುವ ಈ ಉತ್ಸವಗಳು ಹೊಸ ಹೊಗರಿನೊಂದಿಗೆ ಕೂಡಿರುವಂತೆ ಯೋಜಿಸಲಾಗಿದೆ ಎಂದು ವರದಿಯಾಗಿದೆ.

ಬೆಂಗಳೂರಿನ ವೈಯ್ಯಾಳಿ ಕಾವಲಿನಲ್ಲಿರುವ ತಿ·ತಿ.ದೇ· ಕಲ್ಯಾಣಮಂಟಪದಲ್ಲಿ ನಡೆಯುವ ಆರಾಧನೆಯಲ್ಲಿ ಕರ್ನಾಟಕ ಹರಿದಾಸ ಸಾಹಿತ್ಯದ ವಸ್ತು ಪ್ರದರ್ಶನವೊಂದನ್ನೂ ಏರ್ಪಡಿಸಲಾಗಿದೆ. ಇಲ್ಲಿ ಹರಿದಾಸ ಸಾಹಿತ್ಯದ ಸೃಷ್ಟಿಪ್ರಕರಣ, ಹರಿದಾಸರು ಉಪಯೋಗಿಸುತ್ತಿದ್ದ ವಸ್ತುಗಳ ಮಾದರಿಗಳು, ಹಸ್ತಪ್ರತಿಗಳು, ವಿವಿಧ ಭಜನೆ ಮಂಡಳಿಗಳಿಂದಾದ ಹರಿದಾಸ ಸಾಹಿತ್ಯದ ವರ್ಣರಂಜಿತ ರೂಪಕಲ್ಪನೆ ಮೊದಲಾದವುಗಳು 8, 9 ಜೂನ್ ಪ್ರದರ್ಶಿತವಾಗುತ್ತವೆ. ಜೊತೆಗೇ ಪಂಡಿತಶ್ರೇಷ್ಠರಾದ ಡಾ॥ ವರದರಾಜರಾವ್, ರಾಜಾ. ಎಸ್ ಗುರುರಾಜ ಆಚಾರ್ಯ, ಪಂಡರೀನಾಥಾಚಾರ್ಯ ಗಲಗಲಿ ಮೊದಲಾದವರ ಉಪನ್ಯಾಸಗಳೂ ಡಾ॥ ಪ ಶು ಪ ತಿ, ಶ್ರೀ ಬಾಲಕೃಷ್ಣ ಪ್ರಸಾದ್ ಕುಮಾರಿ ಶೋಭಾರಾಜು, ಅವರುಗಳ ಸಂಗೀತ ಕ ಚೇ ರಿ ಗ ಳೂ ಇ ರು ವು ವು. ಪುರಂದರ ದಾಸರು ಶ್ರೀವೆಂಕಟೇಶ್ವರನ ಬಗ್ಗೆ ಬರೆದ ಹಾಡುಗಳು ಪುಸ್ತಕದ ಬಿಡುಗಡೆಯೂ ಉಂಟು. ಆರಾಧನೆಯಲ್ಲಿ ಕರ್ನಾಟಕದ ಮುಖ್ಯಮಂತ್ರಿ ಶ್ರೀ ಗುಂಡೂರಾವ್ ಹಾಗೂ ಮುಜರಾಯಿ ಇಲಾಖಾ ಮಂತ್ರಿ ಶ್ರೀ ಸುಧೀಂದ್ರರಾವ್ ಕಸ್ಬೆ ಅವರೂ ಭಾಗವಹಿಸುವ ನಿರೀಕ್ಷೆಯಿದೆ.

ಮುಳಬಾಗಿಲಿನಲ್ಲಿ ದಿನಾಂಕ 15, 16, ಜೂನ್ ರಂದು ನಡೆಯುವ ಆರಾಧನೆಗಳಲ್ಲಿ ಸರ್ವಶ್ರೀ ಶೇಷ ಕೃಷ್ಣಾಚಾರ್, ಜಯತೀರ್ಥಾಚಾರ್ ಅವರ ಉಪನ್ಯಾಸಗಳೂ, ಭದ್ರಗಿರಿ ಅಚ್ಯುತದಾಸ್, ಶಿವಮೊಗ್ಗ ಶ್ರೀನಿವಾಸದಾಸ್ ಅವರುಗಳ ಹರಿಕಥೆಗಳೂ, ಅನ್ನಮಾಚಾರ್ಯಕಲಾವಿದರ ಸಂಗೀತ ಕಚೇರಿಗಳೂ ಇರುತ್ತವೆ ಎಂದು ವರದಿಯಾಗಿದೆ.

---

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | | | | |
|---|---|---|---|---|
| ಸುಪ್ರಭಾತ | ಬೆಳಗ್ಗೆ | 5–00 ಗಂಟೆಯಿಂದ | 5–30 | ವರೆಗೆ |
| ಸಹಸ್ರನಾಮಾರ್ಚನೆ | ” | 5–30 ಗಂಟೆಯಿಂದ | 6–00 | ವರೆಗೆ |
| ಮೊದಲನೆಯ ಗಂಟೆ | ” | 6–00 ಗಂಟೆಯಿಂದ | 6–30 | ವರೆಗೆ |
| ಸರ್ವದರ್ಶನ | ” | 6–30 ಗಂಟೆಯಿಂದ ಮಧ್ಯಾಹ್ನ | 1–00 | ವರೆಗೆ |
| ಎರಡನೇ ಗಂಟೆ | ಧ್ಯಾಹ್ನ | 1–00 ಗಂಟೆಯಿಂದ | 1–30 | ವರೆಗೆ |
| ಸರ್ವದರ್ಶನ | ,, | 1–30 ರಿಂದ ರಾತ್ರಿ | 7–30 | ವರೆಗೆ |
| ರಾತ್ರಿ ಗಂಟೆ | ರಾತ್ರಿ | 7–00 ರಿಂದ ರಾತ್ರಿ | 8–45 | ವರೆಗೆ |
| ಏಕಾಂತಸೇವೆ, ತೀರ್ಮಾನ | ರಾತ್ರಿ | 8–45 ರಿಂದ ರಾತ್ರಿ | 9–00 | ವರೆಗೆ |

ಗಮನಿಕೆ :– ಶುಕ್ರವಾರಗಳಲ್ಲಿ ಮೇಲಿನ ಕಾರ್ಯಕ್ರಮಗಳಲ್ಲಿ ಬದಲಾವಣೆ ಉಂಟು.
ಸಹಸ್ರನಾಮಾರ್ಚನೆಯ ಟಿಕೆಟ್ ಬೆಲೆ 6–50 ರೂ. ಒಂದು ಟಿಕೆಟ್ಟಿಗೆ ನಾಲ್ವರು ಅನುಮತಿಸಲ್ಪಡುತ್ತಾರೆ.
ಸರ್ವದರ್ಶನದ ಸಮಯದಲ್ಲಿ 1–50 ರೂ. ಟಿಕೆಟ್ಟಿನಿಂದ ಭಕ್ತರು ಅಷ್ಟೋತ್ತರ ಅರ್ಚನೆ ನಡೆಸಿಕೊಳ್ಳಬಹುದು.

ಪೇಷ್ಕಾರ್.

Edited and Published on behalf of the T. T. Devastanams by K. Subba Rao, M. A., and Printed at
T. T. D. Press by M. Vijayakumar Reddy, Manager, T. T. D. Press. Tirupati - 517 501·